# ಅಚಲ

(೧)

ಡಿಸೆಂಬರ್ 15, 1991 ಬೆಲೆ ರೂ. 1-50



ಸಿ. ಎಸ್. ಸವಿತ

ಡಾ. ಮಾರ್ಗರೆಟ್ ಬಿಸ್ವಾಸ್ (ಶೀಲಾ ಮುಳಿಮಠ್)

ಬಿ. ವೈ. ಲಲಿತಾಂಬ

ಗೌರಿ

ಸಂಪುಟ 7 ಸಂಚಿಕೆ 5

"ಅಚಲ" ಪತ್ರಿಕೆಯನ್ನು ಪಡೆಯ ಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹತ್ತು ರೂಪಾಯಿಗಳನ್ನು ಎಂ.ಓ./ಡ್ರಾಫ್ಟ್ ಮೂಲಕ ಕಳುಹಿಸಿ ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು, ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೇ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ
26, 1ನೇ ಮೇನ್, ವೈಯಾಲಿ ಕಾವಲ್
ಬೆಂಗಳೂರು–560 003.

---

ಪುಸ್ತಕ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕಾಗಿ ವಿನಂತಿ.

---

ಸಂಪಾದಕ ಮಂಡಳಿ :
ಎನ್. ಗಾಯತ್ರಿ, ನೇಮಿಚಂದ್ರ, ಶೀಲಾ ಮಳಿಮಠ್
ಕಲೆ : ಚಂದ್ರನಾಥ್

---

ಚಂದಾ ವಿವರ :

| | | |
|---|---|---|
| ವಾರ್ಷಿಕ ಚಂದಾ | : | ರೂ. 10–00 |
| ಬಿಡಿ ಪ್ರತಿ | : | ರೂ. 1–50 |
| ವಿಶೇಷ ಪ್ರತಿ | : | ರೂ. 2–50 |
| ಆಜೀವ ಚಂದಾ | | |
| ವ್ಯಕ್ತಿಗಳಿಗೆ | : | ರೂ. 150–00 |
| ಸಂಸ್ಥೆಗಳಿಗೆ | : | ರೂ. 200–00 |

---

Printed at : PRINTSWELL, 78, 3rd Main Road Nagappa Block, Srirampuram, Bangalore-21 & Published by Dr. G. Ramakrishna on behalf of Jagruthi Mahila Adhyayana Kendra
26, I Main, Vyalikaval, Bangalore-560003.
Editor : N. GAYATRI

# ಕೋಲಾಹಲ ಉಂಟುಮಾಡಿರುವ ಅನಿತಾ ಹಿಲ್

— ಗೌರಿ

ಅಮೇರಿಕದಲ್ಲಿ ಅನಿತಾಹಿಲ್ ಪ್ರಕರಣವು ಕೋಲಾಹಲ ಉಂಟು ಮಾಡಿದೆ. ಇದು ಅನಿತಾಹಿಲ್ ಅವರ ಮೂಲಕ ಉದ್ಯೋಗಸ್ಥ ಮಹಿಳಾ ಸಮುದಾಯ ಎದುರಿಸುವ ಭಾರೀ ಸಮಸ್ಯೆಯೊಂದನ್ನು ಎಲ್ಲರ ಗಮನ ಸೆಳೆಯುವಂತೆ ಮಾಡಿದೆ.

ಅಮೆರಿಕವು ಉದ್ಯೋಗಸ್ಥ ಮಹಿಳೆಯರ ಮೆಕ್ಕಾ ಎಂದೇ ಪ್ರಸಿದ್ಧ, ಹಿಂದೆಂದೂ ಚರ್ಚೆಯಾಗದಷ್ಟು ಚರ್ಚೆ ಇಲ್ಲಿ ಈಗ ನಡೆದಿದೆ, ಇದೇ ಮೊದಲ ಬಾರಿಗೆ ಸ್ತ್ರೀ-ಪುರುಷರು ವಾಸ್ತವಾಂಶವನ್ನು ನೇರವಾಗಿ ನೋಡುವಂಥ ಪರಿಸ್ಥಿತಿಯನ್ನು ಅನಿತಾ ಹಿಲ್ ಪ್ರಕರಣ ಒದಗಿಸಿಕೊಟ್ಟಿದೆ. ತಮ್ಮ "ಬಾಸ್"ಗಳಿಂದ ಮಹಿಳೆ ಎದುರಿಸುವ ಸಂಕಷ್ಟವನ್ನು ಈ ಪ್ರಕರಣ ಬೆಳಕಿಗೆ ತಂದಿದೆ.

ಮತ್ತೊಂದು ಗಮನಾರ್ಹ ಅಂಶವೆಂದರೆ ಅನಿತಾ ಹಿಲ್ ಪ್ರಕರಣವು ಮಹಿಳೆಯರ ಎರಡು ಗುಂಪನ್ನು ಸೃಷ್ಟಿಸಿತು. ಒಂದು ಗುಂಪು ಅನಿತಾ ಹಿಲ್ ಮಾತುಗಳನ್ನು ನಂಬಲೇ ಇಲ್ಲ. ಅವರ ಹೇಳಿಕೆ ಸ್ಪಷ್ಟವಾಗಿಲ್ಲ, ಗೋಜಲು ಗೋಜಲಾಗಿದೆ ಎಂದು ಈ ಗುಂಪು ವಾದಿಸಿತು ಮತ್ತೊಂದು ಗುಂಪು ಅನಿತಾ ಹಿಲ್ ಹೇಳುವುದರಲ್ಲಿ ವಾಸ್ತವಾಂಶವಿದೆ. ಬಹುಶಃ ಆಕೆ ಪೂರ್ತಿಯಾಗಿ ಎಲ್ಲವನ್ನು ಬಹಿರಂಗಗೊಳಿಸಿಲ್ಲ ಎಂದು ಈ ಗುಂಪು ಭಾವಿಸಿತು

ಅನಿತಾ ಹಿಲ್ ಸುದ್ದಿ ಮಾಡಿದ್ದು ಕ್ಲಾರೆನ್ಸ್ ಥಾಮಸ್ ವಿರುದ್ಧ ಆಕೆ ಆರೋಪಗಳನ್ನು ಮಾಡಿದಾಗ ಥಾಮಸ್ ವಿರುದ್ಧ ಲೈಂಗಿಕ ಹಿಂಸಾಚಾರ (ದೌರ್ಜನ್ಯ)ದ ಆಪಾದನೆಗಳನ್ನು ಅನಿತಾ ಹಿಲ್ ಮಾಡಿದರು. ಅದು

(ಪುಟ 13ರಲ್ಲಿ ಮುಂದುವರೆದಿದೆ)

# ಬಸ್ ಮತ್ತು ಮಹಿಳೆ

ತಾಂತ್ರಿಕ ಕೌಶಲ್ಯ, ಔದ್ಯೋಗಿಕ ಪ್ರಗತಿಯ ಬಗ್ಗೆ ಮಾತು ಬಂದಾಗಲೆಲ್ಲಾ ಜಪಾನಿನತ್ತ ಪ್ರಶಂಸೆಯಿಂದ ನೋಡಿ ಅವರಿಂದ ಪಾಠ ಕಲಿಯಬೇಕೆಂದು ಸೂಚಿಸುವುದು ನಮ್ಮಲ್ಲಿ ವಾಡಿಕೆಯಾಗಿ ಬಿಟ್ಟಿದೆ. ಹಾಗೆಯೇ ಪರಿಸರ ಶುಚಿತ್ವ, ಸಮಯ ಪ್ರಜ್ಞೆ, ಕಾರ್ಯದಕ್ಷತೆಯ ವಿಷಯ ಬಂದಾಗಲೆಲ್ಲಾ ವಿದೇಶದತ್ತ ದೃಷ್ಟಿ ಹಾಯಿಸುವ, ಅವರನ್ನು ನಮ್ಮ ಆದರ್ಶಗಳಾಗಿ ಭಾವಿಸುವ ನಮ್ಮ ಜನಕ್ಕೆ ನೆರೆ ನಾಡುಗಳಾದ ಕೇರಳ, ತಮಿಳುನಾಡು, ಮಹಾರಾಷ್ಟ್ರ, ದೆಹಲಿಯ ಸಾರಿಗೆ ಬಸ್ಸುಗಳಲ್ಲಿ ಸ್ತ್ರೀಯರಿಗೆ ಸ್ಥಳ ಮೀಸಲಾಗಿ ಇಟ್ಟಿರುವ ವ್ಯವಸ್ಥೆ ಏಕೆ ಕಣ್ಣಿಗೆ ಬೀಳುವುದಿಲ್ಲ ? 1991ರ ಸೆಪ್ಟೆಂಬರ್ 1ರಂದು ಕರ್ನಾಟಕ ರಾಜ್ಯ ಸರ್ಕಾರ ಸಾರ್ವಜನಿಕ ಸಾರಿಗೆ ಬಸ್ಸುಗಳಲ್ಲಿ ಮಹಿಳೆಯರಿಗೆ ಮೀಸಲಾತಿಯನ್ನು ಘೋಷಿಸಿದಂದಿನಿಂದ ಬಸ್ಸಿನಲ್ಲಿ ಸಂಚಾರ ಮಾಡುವ ಸ್ತ್ರೀ ಪುರುಷರಲ್ಲಿ ಒಂದು ರೀತಿಯ ಪರಸ್ಪರ ದ್ವೇಷ, ಅಸೂಯೆ ಹಾಗೂ ವೈಮನಸ್ಯ ಹೆಚ್ಚಾಗಲು ಕಾರಣವಾಗಿದೆ.

ಇಂದು ದುಡಿಯುತ್ತಿರುವ ಮಹಿಳೆಯರ ಸಂಖ್ಯೆ ಹಿಂದೆಂದಿಗಿಂತ ಹೆಚ್ಚಾಗಿದೆ. ಅಷ್ಟೇ ಅಲ್ಲದೆ ಪುರುಷರ ಸಂಖ್ಯೆಗೆ ಹೋಲಿಸಿದರೆ ಖಾಸಗಿ ವಾಹನಗಳನ್ನು ಬಳಸುವ ಮಹಿಳೆಯರ ಸಂಖ್ಯೆ ಕಡಿಮೆಯೇ ಇಂತಹ ಸಂದರ್ಭದಲ್ಲಿ ಸಾರ್ವಜನಿಕ ಸಾರಿಗೆ ವ್ಯವಸ್ಥೆಯನ್ನು ಮುಖ್ಯವಾಗಿ ಅವಲಂಬಿಸಿ ರುವ ಮಹಿಳೆಯರು ಕೆಲವೊಂದು ಅಪೇಕ್ಷಿತ ಸೌಲಭ್ಯಗಳನ್ನು ಸಾರ್ವಜನಿಕ ಜೀವನದಲ್ಲಿ ಬಯಸಿದರೆ ಅದೊಂದು ದೊಡ್ಡ ಪ್ರಮಾದವಾಗಬೇಕಾಗಿಲ್ಲ. ಹೆಣ್ಣಿಗೇ ವಿಶಿಷ್ಟವಾದ ದೈಹಿಕ ಬೇನೆಗಳಿಂದ ನರಳು ತ್ತಿರುವವರು, ಮುಟ್ಟು, ಬಸಿರು, ಬಾಣಂತನದ ತಾಪತ್ರಯಕ್ಕೆ ಸಿಕ್ಕಿ ಆಯಾಸ ಪಡುವ ಹೆಂಗಸರು ಕೂಡಲು ಸ್ಥಳ ಬಯಸಿದರೆ ತಪ್ಪೇ ?

ದೇಶದ ಹಲವಾರು ರಾಜ್ಯಗಳಲ್ಲಿ ಬಸ್‌ಗಳಲ್ಲಿ ಸ್ತ್ರೀಯರಿಗಿರುವ ವಿಶೇಷ ವ್ಯವಸ್ಥೆಯು ಸಾಕಷ್ಟು ಯಶಸ್ವಿಯಾಗಿದ್ದು ಅದು ಆ ನೆಲದ ಸಂಸ್ಕೃತಿಯ ಭಾಗವಾಗಿಯೇ ಮೂಡಿ ಬಂದಿದೆ. ಆದರೆ ಕರ್ನಾಟಕದಲ್ಲಿ ಮಾತ್ರ ಇದಕ್ಕೆ ಪ್ರತಿಕೂಲ ಇರುವುದಕ್ಕೆ ಕಾರಣವಾದರೂ ಏನು ? ಸಾರ್ವಜನಿಕ ಜೀವನವನ್ನು ಹೆಚ್ಚು ಹೆಚ್ಚಾಗಿ ಮಹಿಳೆಯರು ಪ್ರವೇಶಿಸುತ್ತಿರುವುದರಿಂದ ಉಂಟಾಗುತ್ತಿರುವ ಸಾಮಾಜಿಕ ಬದಲಾವಣೆಗೆ ಸ್ಪಂದಿಸಲು ಆಗದ ಇಲ್ಲಿನ ಪುರುಷ ಸಮುದಾಯದ ಒಂದು ವರ್ಗಕ್ಕೆ ಉಂಟಾಗಿರುವ ಅಸಮಾಧಾನವೂ ಇದಕ್ಕೆ ಕಾರಣವಾಗಿದೆ. ಸಾಮಾನ್ಯವಾಗಿ ಇಂತಹದೊಂದು ವ್ಯವಸ್ಥೆಗೆ ವಿರೋಧ ತೋರಿಸುತ್ತಿರುವವರು ಯುವಕರು ಹಾಗೂ ಬಿಸಿ ರಕ್ತದ ತರುಣರೇ ಆಗಿದ್ದಾರೆ, ಇಂತಹ ದೊಂದು ಪ್ರತಿರೋಧದ ಹಿಂದೆ ಹಲವಾರು ಮಿಶ್ರ ಭಾವನೆಗಳು ಕೆಲಸ ಮಾಡುತ್ತಿರುತ್ತದೆ. ಸ್ತ್ರೀಯರು ತಮ್ಮ ಉದ್ಯೋಗವನ್ನು, ಸ್ಥಾನವನ್ನು ಕಸಿದುಕೊಳ್ಳಲು ಬಂದವರೆಂಬ ಅಸೂಯೆ ಒಂದೆಡೆ

ಯಾದರೆ, ಸಹಜವಾಗಿಯೇ ಸ್ತ್ರೀಯರನ್ನು ಕುರಿತಾಗಿರುವ ಅಸಡ್ಡೆಯೂ ಮತ್ತೊಂದು ಬಹು ಮುಖ್ಯ ಕಾರಣವಾಗಿದೆ. ಹೆಚ್ಚೆಂದರೆ ಕೇವಲ ಅರ್ಧ ತಾಸು ಕುಳಿತುಕೊಳ್ಳಲು ಸ್ಥಳ ಕೊಡಲು ನಿರಾಕರಿಸುವ ಪುರುಷ ಪ್ರಯಾಣಿಕರು ಜೀವನದುದ್ದಕ್ಕೂ ತಾವು ಇದುವರೆಗೂ ಅನುಭವಿಸಿ ಆನಂದಿಸುತ್ತಿರುವ ಹಲವಾರು ಸೌಕರ್ಯಗಳನ್ನು ಹೆಣ್ಣಿನೊಂದಿಗೆ ಹಂಚಿಕೊಳ್ಳಲು ಸಾಧ್ಯವೇ ಎಂಬುದನ್ನು ಯೋಚಿಸಿದರೆ ನಿರಾಶೆ ಕಾದಿಟ್ಟ ಬುತ್ತಿಯಾಗುತ್ತದೆ.

ಕರ್ನಾಟಕದಲ್ಲಿರುವ ಕೆಟ್ಟ ಸಾರಿಗೆ ವ್ಯವಸ್ಥೆಯಲ್ಲಿ ಕೆಲವು ಸಮಯಗಳ ಕಾಲ ಕೆಲವು ಮಹಿಳೆಯರೂ ಕುಳಿತುಕೊಳ್ಳಲು ಸ್ಥಳ ದೊರೆತುಬಿಟ್ಟರೆ ಅದರಿಂದ ಅವರಿಗೆ ಅದ್ಭುತ ಜಯ ದೊರೆತು ಬಿಟ್ಟಂತಾಗುತ್ತದೆ ಎಂದು ಭಾವಿಸಲಾಗದು. ಆದರೆ ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣನ್ನು ಕುರಿತ ಆಲೋಚನಾಕ್ರಮವು ತಳೆಯಬೇಕಾದ ಆರೋಗ್ಯಕರ ಮೌಲ್ಯಗಳನ್ನೂ ನಿರ್ದೇಶಿಸುವ ಹಾಗೂ ನಮ್ಮ ಸಂಸ್ಕೃತಿಯ ದಿಕ್ಕನ್ನು ಸೂಚಿಸುವ ಒಂದು ಚಿಕ್ಕ ಪ್ರಯತ್ನ ಇದಾಗುತ್ತದೆಂದು ಭಾವಿಸುವುದರಲ್ಲಿ ತಪ್ಪೇನಿಲ್ಲ.

☐ ಎನ್. ಗಾಯತ್ರಿ

## ಸ್ತ್ರೀವಾದ

ಸ್ತ್ರೀವಾದದ ಬಗ್ಗೆ ತಪ್ಪು ಕಲ್ಪನೆ ನಮ್ಮಲ್ಲಿ ಪ್ರಚುರಗೊಂಡಿರುವಷ್ಟು ಸರಿಯಾದ ಕಲ್ಪನೆ ಪ್ರಚುರಗೊಂಡಿಲ್ಲವೆಂದು ತೋರುತ್ತದೆ ........ ಮಹಿಳಾವಾದ ವಿಕಾಸಗೊಂಡ ರೀತಿಯನ್ನು ಗಮನಿಸಿದೆ, ಮಹಿಳಾವಾದ ಏನು ಹೇಳುತ್ತಿದೆಯೆಂಬುದನ್ನು ಸರಿಯಾಗಿ ವಿಚಾರಿಸದೆ ಯಾವುದೇ ಕೆಲವು ವಿಚಾರ, ನಡವಳಿಕೆಗಳನ್ನು ಬಿಡಿಯಾಗಿ ನೋಡಿ ಅಥವಾ ಅಪಪ್ರಚಾರವನ್ನು ಕೇಳಿ ತಪ್ಪು ಗ್ರಹಿಕೆ, ಭಯ ಉಂಟಾಗಬಹುದು ಸ್ತ್ರೀವಾದಿ ಎಂದ ಕೂಡಲೆ ಈ ಹೆಸರಿನಲ್ಲಿ ಬರುವುದನ್ನೆಲ್ಲ ಅನು ಮೋದಿಸುತ್ತೇವೆಂದು ಅರ್ಥವಲ್ಲ ಸ್ತ್ರೀವಾದದ ಮೂಲಭೂತ ಕಾಳಜಿಯಲ್ಲಿ ನಮಗೆ ಸಹಮತವಿದ್ದರೆ ನಾವೂ ಸ್ತ್ರೀವಾದಿಗಳೇ. ಸ್ತ್ರೀಯರಿಗೆ ಎಲ್ಲ ಬಗೆಯ ಸಮಾನ ಅವಕಾಶ, ಸ್ಥಾನಮಾನ ಈ ವಾದದ ಉದ್ದೇಶ, ಸ್ತ್ರೀವಾದ ಮಾನವತಾವಾದದ ಒಂದು ಭಾಗವೇ ಆಗಿದೆ. ಮತ್ತೊಬ್ಬ ವ್ಯಕ್ತಿಯ ಘನತೆ, ಅಂತಸ್ಸತ್ವ, ಸ್ವಾತಂತ್ರ್ಯವನ್ನು ತಕ್ಕ ವಿಶ್ವಾಸ, ಗೌರವದಿಂದ ನಾವು ಮಾಡಬೇಕೆಂಬುದೇ ಈ-ವಾದದ ಒಳ ತಿರುಳೂ ಆಗಿದೆ ......... ಸ್ತ್ರೀಯರ ವಿಕಾಸ, ಸ್ವಾತಂತ್ರ್ಯ ಹಕ್ಕುಗಳನ್ನು ಎತ್ತಿಹಿಡಿಯುವುದು ಅವಶ್ಯವಾಗಿದೆ. ಈ ಅವಶ್ಯಕತೆಯನ್ನೇ ಸ್ತ್ರೀವಾದ, ಸ್ತ್ರೀವಿಮೋಚನಾ ಹೋರಾಟ, ತುಂಬಿ ಕೊಡುತ್ತಿದೆ."

ಮೈಸೂರಿನ "ಸಮತಾ" ಪ್ರಕಟಿಸಿರುವ "ಸ್ತ್ರೀವಾದ-ದಕ್ಷಿಣ ಏಷ್ಯಾದಲ್ಲಿ ಅದರ (ತಸಕ್ತತೆ) ಪುಸ್ತಕದ ಡಾ|| ವಿ. ವಿಜಯಾ ಬರೆದಿರುವ ಮುನ್ನುಡಿಯಿಂದ.

## ಕ ವ ನ

### ಧಾ ರಾ ವಾ ಹಿ

ಸಿ. ಎನ್. ಸವಿತ

ಎಲ್ಲ ಸಹಜ ಪರಿಣಾಮಗಳಲ್ಲಿ ಅರಳಿದ ಹೆಣ್ಣು
ನೀಹಾರಿಕೆಗಳ ನಡುವೆ
ಬೆಳುದಿಂಗಳ ಹುಡಿಯಲ್ಲಿ ಬಿಡಿಸಳೆ
ಕನಸುಗಳ ರಂಗೋಲಿ ?

ರಂಗೋಲಿಗಳ ನಡುವೆ
ಹಣತೆಗಳ ಹಚ್ಚಿಟ್ಟು
ಕಾದ ಧೀಷ ರಾತ್ರಿಗಳ ಲೆಕ್ಕ
ಜಾತಕಗಳ ಕೂಡಿ ಕಳೆದಲ್ಲಿ ಹರೆಯ ಇಪ್ಪತ್ತು

ಒಂದಿಷ್ಟು ಹಾಡು. ಒಂದಿಷ್ಟು ವೀಣೆ
ಕಸೂತಿಯಲ್ಲಿಷ್ಟು ಪರಿಣತಿ
ಹತ್ತರಲ್ಲೊಂದು ಎಂಬಂಥ ರೂಪ
ಕಾವ್ಯಕ್ಕೆ ಸ್ಪಂದಿಸುವ ಹೃದಯ

ಮದುವೆ ಮನೆಯಲ್ಲಿ ಕಂಡು
ಮೆಚ್ಚಿದವನಂತೆ ಹುಡುಗ, ಸ್ವಜಾತಿ.
ಎಣಿಸಿದಾಗ ಜಾತಕವೂ ಕೂಡಿ
ವಧು ಪರೀಕ್ಷೆಯಷ್ಟೇ ಬಾಕಿ

ಅದೂ ಮುಗಿದು, ತಂದ ಕನಸುಗಳ ಧಾರಾವಾಹಿ
ಕೊನೆಗೊಂಡದ್ದು ಆಂಚೆ ಕಾಗದದಲ್ಲಿ
ಹುಡುಗಿ ದಪ್ಪ. ಹಿಂದಿನ ಕತೆ ಬೇರೆ
ಕುದುರದ ವ್ಯವಹಾರ, ತೆರೆ ಇಳಿದ ಅಂಕ.

ಗಜಿಬಿಜಿ ಬಜಾರಿನ ಮಾಮೂಲು ಗದ್ದಲದ ನಡುವೆ
ಕೊಂಡ ಸ್ಟ್ರೀಫ್ರೀ ಎದೆಗೊತ್ತಿ ಬರುವಾಗ
ಎದುರಾದ ಅವನು, ತನ್ನ ಗಜವದನೆ ಸತಿಯೊಡನೆ
ಗಮನ ಸೆಳೆದು ನಕ್ಕ ನಗೆ ಎದೆಗೆ ಚೇಳು

ಮನೆಗೆ ಬಂದರೂ ಅದೇ
ಎದೆಯೊಳಗೆ ಮುರಿದ ಮುಳ್ಳು

ಹೊಟ್ಟೆಯಲಿ ಹುಟ್ಟಿದ ನೋವು
ಸೊಂಟಕ್ಕೂ ಹರಿದು, ಬುಳ ಬುಳನೆ
ಹೊರ ಬಂದ ಬೆಚ್ಚನೆ ತೇವ, ಬಚ್ಚಲಿಗೆ ಹೋಗಿ ಬಂದೆ
ಸೋರಿ ಹೋಯಿತು ಎಲ್ಲ ಮೂರು ದಿನಗಳಲ್ಲಿ
ಭ್ರಮೆಗಳೆಲ್ಲ

ಮತ್ತೊಂದು ಮುಟ್ಟಿಗೆ
ಅನುವಾದೆ,

# ತಾಯ್ತನವೆಂಬ ಮಿಥ್ಯೆ

□ ಡಾ|| ಮಾರ್ಗರೇಟ್ ಬಿಸ್ವಾಸ್

ಮಹಿಳೆ ಪ್ರತಿಯೊಂದು ಕ್ಷೇತ್ರದಲ್ಲಿಯೂ ತುಳಿಯಲ್ಪಟ್ಟಿದ್ದಾಳೆ. ಎಂಬುದು ಇಲ್ಲಿನ ಪ್ರಶ್ನೆಯಲ್ಲ ಪ್ರತಿಯೊಬ್ಬ ಮಹಿಳೆಯೂ ತನ್ನನ್ನು ದಮನಕ್ಕೊಳಪಡಿಸಿರುವ ಆಂತರಿಕ ಒತ್ತಡವನ್ನು ಅರಿಯುತ್ತಿರುವಾಗಲೇ, ತಾವು ದಬ್ಬಾಳಿಕೆಗೆ ಒಳಗಾಗುತ್ತಿರುವುದು ಅವರ ಗಮನಕ್ಕೆ ಬರುವುದೇ ಇಲ್ಲ ಇತರರು ಇದರ ಅರಿವಿದ್ದೂ ಇದಕ್ಕೇ ಆತುಕೊಳ್ಳುತ್ತಿದ್ದಾರೆ. ಇಂದಿನ ಮಹಿಳೆ ತನ್ನ ದಾರಿಯಲ್ಲೇ ಮೂರ್ಖ ಪ್ರಯತ್ನ ಪಡೆಯುತ್ತಾ, ಪ್ರಜ್ಞಾಪೂರ್ವಕವಾಗಿ ತನ್ನ ಪುರುಷನನ್ನು ಸಂತೋಷವಾಗಿಡಲು ಸ್ವಸಂತೋಷವನ್ನು ಬಲಿಕೊಡುವುದು ತನ್ನ ಕರ್ತವ್ಯ, ಹೀಗಾದಾಗ ಮಾತ್ರ ತಾನು ಮನುಷ್ಯಳಾಗುತ್ತೇನೆಂದು ತೃಪ್ತಳಾಗುತ್ತಿದ್ದಾಳೆ ತನ್ನ ಮಕ್ಕಳ ಮತ್ತು ಪತಿಯ ಸಾಧನೆಯೇ ತನ್ನ ಸಾಧನೆಯೆಂದು ಸ್ವೀಕರಿಸಿ, ತನ್ನ ಗುರಿ ಹಾಗೂ ಬಯಕೆ ತನ್ನ ಮಕ್ಕಳ ಪತಿಯ ಏಳಿಗೆಯೊಂದೇ ಎಂದುಕೊಂಡು ತನ್ನ ಇಡೀ ಜೀವನದಿಂದ ವಿಮುಕ್ತಳಾಗುತ್ತಿದ್ದಾಳೆ ಹಾಗೂ ಇದೇ ತನ್ನ ಬಾಳಿನ ಮುಖ್ಯ ಪ್ರಗತಿಯೆಂಬ ಮೋಸಕ್ಕೊಳಗಾಗುತ್ತಿದ್ದಾಳೆ. ಯಾವ ಮಹಿಳೆ ಇದು ತ್ಯಾಗಕ್ಕಿಂತ ಅತಿಯಾದದ್ದು ಎಂದು ತಿಳಿದು, ಇದರ ಸಂಬಂಧವ ಅರ್ಥ ತಿಳಿಯುತ್ತಾಳೋ ಹಾಗೂ ಯಾವ ಮಹಿಳೆ ಇಂತಹ ಸಂಬಂಧವನ್ನು ತಿರಸ್ಕರಿಸುತ್ತಾಳೋ ಮತ್ತು ಈ ವಿರೋಧಾಭಾಸವನ್ನು ಅರಿಯುತ್ತಾಳೋ ಅಂತಹ ತಾಯಿಗೂ ಸಮಾಜದಲ್ಲಿ ಈಗಾಗಲೇ ಸ್ಥಿರಗೊಂಡಿರುವ ತಾಯ್ತನದ ಆದರ್ಶದಿಂದ ಪಲಾಯನಗೊಳ್ಳುವುದು ಕಷ್ಟದ ಕೆಲಸವೇ ಆಗಿದೆ.

ತಾಯ್ತನ ಹೊಂದದೆ ಇರುವ ವಿವಾಹಿತ ಮಹಿಳೆ ತಾನು ಈ ಮೇಲಿನ ಒಂದು ಸಮಸ್ಯೆಯಿಂದ ದೂರವಾಗಿದ್ದೇನೆಂದು ತಿಳಿದರೆ ತಪ್ಪಾಗುತ್ತದೆ. ಏಕೆಂದರೆ ಇಂತಹವರ ಸ್ವಾತಂತ್ರ್ಯದ ಕಲ್ಪನೆಯೇ ಭ್ರಮಾತ್ಮಕವಾಗಿರುತ್ತದೆ. ಮೊದಲನೆಯದಾಗಿ ಇಂತಹವರ ದೃಷ್ಟಿಯಲ್ಲಿ ಗೃಹಕೃತ್ಯದಲ್ಲಿ ಪಾಲುಗಾರಿಕೆ ಮತ್ತು ಕುಟುಂಬದ ನಿರ್ಣಯಗಳನ್ನು ತೆಗೆದುಕೊಳ್ಳುವ ಅವಕಾಶಗಳು ಸಿಕ್ಕಿಬಿಟ್ಟ ಮಾತ್ರಕ್ಕೆ ಸ್ತ್ರೀ ವಿಮೋಚನೆಯೆಂಬುದಾಗಿ ತಿಳಿದಿರುತ್ತಾರೆ. ಎರಡನೆಯದಾಗಿ ಇವರು ತಾವು ಒಂದಲ್ಲ, ಒಂದು ದಿನ ಮಗುವನ್ನು ಪಡೆಯಬೇಕಾಗಬಹುದು ಎಂದು ವಾದಿಸುತ್ತಾರೆ.

ತಾಯ್ತನ ಎನ್ನುವುದು ಸಮಾಜದ ಚಿನ್ನದ ಕಂಪುಗಟ್ಟು. ಮಗುವಿಲ್ಲದಿದ್ದರೂ ತನ್ನ ಕೆಲವು ಸ್ನೇಹಿತರು, ತೃಪ್ತಿ ಕೊಡುವ ಉದ್ಯೋಗ-ಇವುಗಳಷ್ಟರಿಂದಲೇ ತೃಪ್ತಳಾಗಿರುವಳೆಂದರೆ ಅವಳು ಅತಿಮಾನವಳೇ ಆಗಿರಬೇಕು ಎಂದು ಸಮಾಜ ಗ್ರಹಿಸುತ್ತದೆ. ಇಂತಹದೊಂದು ಕಲ್ಪನೆ ನಮ್ಮ ಸಮಾಜದಲ್ಲಿ ಮೂಡಿರುವುದಾದರೂ ಏಕೆ ? ಮಹಿಳೆಯನ್ನು ಆವರಿಸುವ ಕೇಂದ್ರ ಗ್ರಹಿಕೆಯೇ ಹೆಣ್ಣಿನ ಸಾರ್ಥಕವನ್ನು ತಾಯ್ತನವನ್ನು ಕಾಣುವುದಾಗಿದೆ. ಹಲವಾರು ವೃತ್ತಿಪರರು, ಮನೋವಿಜ್ಞಾನಿಗಳು, ಬುದ್ಧಿಜೀವಿಗಳು, ವೈದ್ಯರು, ಸಮಾಜ ವಿಜ್ಞಾನಿಗಳು, ಜಾಹಿರಾತುದಾರರು ಮತ್ತು ಎಲ್ಲಾ ಪ್ರಸಾರ ಮಾಧ್ಯಮಗಳು ತಮ್ಮಿಷ್ಟ ಬಂದಂತೆ ತಾಯಿ ಮತ್ತು ಮಗುವಿನ ಸಂಬಂಧದ ಮಹತ್ವವನ್ನು ವೈಭವಿಸುವ, ಔನ್ನತ್ಯಕ್ಕೇರಿಸುವ ಕಾರ್ಯದಲ್ಲಿ ಮಗ್ನವಾಗಿವೆ. ಇದರಿಂದಾಗಿ ಎಳೆಯರು ಈ ನಂಬಿಕೆಗಳನ್ನು, ಪೂರ್ವಾಗ್ರಹಗಳನ್ನು (Dubious Findings)................ ಸಾಂಪ್ರದಾಯಿಕ ತಿಳುವಳಿಕೆಯಾಗಿ ಪರಿಭಾವಿಸುತ್ತಾರೆ. ಆದ್ದರಿಂದ ತಾಯ್ತನವನ್ನು ಕುರಿತ ಈ ಗ್ರಹಿಕೆಯಿಂದ ಯಾರೂ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಕೊನೆಗೆ ಮಗುವಿಗೆ ತಾಯಿಯ ಅಗತ್ಯವಿದೆ ಹಾಗಾಗಿ ತಾಯಿಗೂ ಮಗು ಬೇಕಾಗಿದೆ ಎಂಬ ಸ್ವಯಂಸಿದ್ಧವಾದ ಸತ್ಯದೆಡೆಗೆ ಎಲ್ಲರೂ ತಲುಪುತ್ತೇವೆ.

ಮಕ್ಕಳನ್ನು ನೋಡಿಕೊಳ್ಳುವುದು ಮತ್ತು ಬೆಳೆಸುವುದು ಕಠಿಣವಾದ ಹಾಗೂ ಬಹುಮುಖ್ಯವಾದ ಕಾರ್ಯ ಎಂದು ಎಲ್ಲರೂ ಪರಿಗಣಿಸಿದರೂ ಉತ್ಪಾದನಾ ಮಾರುಕಟ್ಟೆಯಲ್ಲಿ ಈ ಕಾರ್ಯಕ್ಕೆ ಯಾವುದೇ ಬೆಲೆಯಿಲ್ಲ. ಆದಕಾರಣ ಮಕ್ಕಳನ್ನು ಬೆಳೆಸುವ ತಾಯಿಯ ಕೆಲಸಕ್ಕೆ

ಯಾವುದೇ ರೀತಿಯ ಆರ್ಥಿಕ ಉತ್ಪಾದನಾ ಮೌಲ್ಯವಿಲ್ಲ. ಈ ಕಾರಣದಿಂದಲೇ ಹೆಣ್ಣಿನ ದುಡಿಮೆಯನ್ನು ಆರ್ಥಿಕ ಕಾರಣಗಳಿಗಾಗಿ ಗುರುತಿಸದೆ ಆಧ್ಯಾತ್ಮಿಕ ಕಾರಣಗಳಿಗಾಗಿ ಗುರುತಿಸುವುದರಿಂದ ತುಂಬ ಅಗತ್ಯವಾಗಿ ಸಿಕ್ಕುತ್ತದೆ ಎಂಬುದು ವ್ಯವಸ್ಥೆಯ ತಿಳುವಳಿಕೆಯೂ ಆಗಿದೆ. ಆದ್ದರಿಂದಲೇ ವ್ಯವಸ್ಥೆಯ ಹಿತಾಸಕ್ತಿಯನ್ನು ಕಾಯುವುದಕ್ಕಾಗಿಯೇ ಇಂತಹದೊಂದು ಯಥಾಸ್ಥಿತಿಯನ್ನು ಕಾಪಾಡಲು ಪ್ರಯತ್ನಿಸಲಾಗುತ್ತದೆ. ಶಿಶುಪಾಲನಾ ಕೇಂದ್ರಗಳು ಮತ್ತು ನರ್ಸರಿ ಶಾಲೆಗಳ ಸೌಲಭ್ಯಗಳ ಬಗ್ಗೆ ಕಿಂಚಿತ್ತೂ ಸರ್ಕಾರ ಗಮನ ಹರಿಸದಿರುವುದು ಇಂತಹದೊಂದು ಧೋರಣೆಯಿಂದ ಉಂಟಾದ ಅಪಾಯಕಾರಿ ಪರಿಣಾಮವಾಗಿದೆ. ಸರ್ಕಾರದ ಹಣವನ್ನು ಅತ್ಯಂತ ಕ್ಷೇಮವಾಗಿ ಉಳಿಸುವ ಪರಿಣಾಮಕಾರಿ ಮಾರ್ಗವೆಂದರೆ, ಮಕ್ಕಳು ಶಾಲೆಗೆ ಹೋಗುವ ವಯಸ್ಸಾಗುವವರೆಗೂ ತಾಯಿಯ ಆರೈಕೆಯಲ್ಲಿಯೇ ಮನೆಯಲ್ಲಿ ಉಳಿಯುವಂತೆ ಮಾಡುವುದು. ಈ ರೀತಿ ಮಾಡುವುದರಿಂದ ತಾಯಿ ಮತ್ತು ಮಗುವಿನ ಸಂಬಂಧದ ಪ್ರಾಮುಖ್ಯವನ್ನು ಮತ್ತೆ ಮತ್ತೆ ಒತ್ತಿ ಹೇಳಿದಂತಲೂ ಆಗುತ್ತದೆ. ಇದೇ ವಿಷಯವನ್ನು ಎಲ್ಲಾ ಮೂಲೆಗಳಿಂದಲೂ ಭಾಜಾ ಭಜಂತ್ರಿಯೊಂದಿಗೆ ಸಾರಲಾಗುತ್ತದೆ. ಮನೋವಿಜ್ಞಾನಿಗಳಿಂದ ಹಿಡಿದು ಮಹಿಳಾ ಪತ್ರಿಕೆಗಳವರೆಗೆ ಮಗುವಿಗೆ ಇರುವ ತಾಯಿಯ ಅವಶ್ಯಕತೆಯನ್ನು ಹೆಚ್ಚು ಹೆಚ್ಚು ಮನದಟ್ಟು ಮಾಡಿ ತಾಯಿಯ ಸಾಮಿಪ್ಯದಿಂದ ವಂಚಿತವಾಗುವ ಮಗು ಅನೇಕ ಕಷ್ಟಗಳನ್ನು ಎದುರಿಸಬೇಕಾಗುತ್ತದೆ, ಕೊನೆಗೆ ಅಪರಾಧಿಯೂ ಆಗಬಹುದು ಎಂಬ ನಿರ್ಣಯಕ್ಕೆ ಬರಲಾಗುತ್ತದೆ. ಮಹಿಳೆಯರೂ ಕೂಡ ಈ ಅಂಶವನ್ನು ಎಷ್ಟೊಂದು ಮನದಟ್ಟು ಮಾಡಿಕೊಂಡಿರುವರೆಂದರೆ, ಅವರೂ ಕೂಡ ಮಕ್ಕಳ ಸಂಪೂರ್ಣ ಜವಾಬ್ದಾರಿಯನ್ನು ತಮ್ಮ ಮೇಲೇ ಎಳೆದುಕೊಳ್ಳುತ್ತಾರೆ. ಇನ್ನೂ ಮುಂದುವರಿದಂತೆ ಅವರು, ಅವರ ಮಕ್ಕಳು ತಂದೆಯನ್ನು, ಅಜ್ಜ ತಾತನನ್ನು, ಶಾಲೆಯನ್ನು ಗೆಳೆಯರ ಬಳಗವನ್ನು ಬೇಕಾದರೂ ಬಿಟ್ಟು ಇರಬಲ್ಲರು. ಆದರೆ, ತಾಯಿಯ ಸಾಮಿಪ್ಯವಿಲ್ಲದೆ ಇದ್ದಲ್ಲಿ ಮಕ್ಕಳು ಹಾಳಾಗುವರು ಎಂಬ ತೀರ್ಮಾನಕ್ಕೆ ಬಂದು ಬಿಡುತ್ತಾರೆ. ಅದರ ಪರಿಣಾಮವಾಗಿ ಪಠ್ಯ ಪುಸ್ತಕಗಳಲ್ಲೂ ಕೂಡ ಸಣ್ಣ ಮಕ್ಕಳು ಮಾನಸಿಕವಾಗಿ ತಾಯಿಯನ್ನೇ ಅವಲಂಬಿಸಿರುತ್ತಾರೆ, ಎಂಬುದಾಗಿ ಬರೆಯಲಾಗುತ್ತದೆ.

ಈ ತಾಯಿಯ ಹಂಬಲದಿಂದ ಮಕ್ಕಳು ವಂಚಿತರಾಗುತ್ತಾರೆ, ಎನ್ನುವುದರ ಪರ ಮತ್ತು ವಿರೋಧದ ಬಗೆಗಿರುವ ಸಾಕ್ಷಿಗಳಾದರೂ ಏನು ? ಮೊದಲನೆಯದಾಗಿ ಮಕ್ಕಳಿಗೆ ಸಂಬಂಧಪಟ್ಟ ಎಲ್ಲ ಮೂಲಭೂತ, ದೈನಂದಿನ ಕೆಲಸಗಳು ಕುಟುಂಬದಲ್ಲಿಯೇ ನಡೆಯಬೇಕಾಗುತ್ತದೆ. ಸಹಜವಾಗಿಯೇ ತಾಯಿಯಿಲ್ಲದ ಕುಟುಂಬಗಳಲ್ಲಿ ಮಕ್ಕಳನ್ನು ಬೆಳೆಸುವುದು ಕಷ್ಟವಾಗುತ್ತದೆ. ಒಂದು ವೇಳೆ ತಾಯಿಯಿಲ್ಲದ ಕುಟುಂಬಗಳಲ್ಲಿ ಮಕ್ಕಳು ಬೆಳೆದರೂ ಅವರು ಕೇವಲ ತಾಯಿಯ ಪ್ರೀತಿಯಿಂದ ಮಾತ್ರವಲ್ಲ, ತಂದೆಯ ಪ್ರೀತಿಯಿಂದಲೂ ವಂಚಿತರಾಗುತ್ತಾರೆ. ಇಷ್ಟೆಲ್ಲ ತಾಯಿ ಮತ್ತು ಮಗುವಿನ ಸಂಬಂಧದ ಬಗ್ಗೆ ಪ್ರಚಾರ ಮಾಡಿದರೂ ತಾಯಿಯ ಉದ್ಯೋಗಕ್ಕೂ ಅಪರಾಧಿಗಳಾಗುವ ಮಕ್ಕಳ ಸಂಖ್ಯೆಗೂ ಸಂಬಂಧವಿರುವುದನ್ನು ಯಾವ ಅಧ್ಯಯನಕ್ಕೂ ಸ್ಥಾಪಿಸಲಾಗಿಲ್ಲ, 1965ರಲ್ಲಿ ಕ್ಯಾಲಿಫೋರ್ನಿಯಾದ ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಮೆಂಟಲ್ ಹೆಲ್ತ್‌ನವರು ನಡೆಸಿದ ಸಂಶೋಧನೆಯ ಪ್ರಕಾರ 316 ಬಾಲ ಅಪರಾಧಿಗಳಲ್ಲಿ ಶೇಕಡ 98ರಷ್ಟು ಮಕ್ಕಳಿಗೆ ತಂದೆಯಿರಲಿಲ್ಲವೆಂದೂ, ಕೇವಲ ಶೇಕಡ 17ರಷ್ಟು ಮಕ್ಕಳಿಗೆ ತಾಯಿಯಿರಲಿಲ್ಲವೆಂದೂ ಕಂಡು ಬಂದಿದೆ. ಮಕ್ಕಳ ಬೆಳವಣಿಗೆಯಲ್ಲಿ ಮುಖ್ಯವಾಗುವ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಕಾರಣಗಳನ್ನು ಗಮನಿಸದೆ ಕೇವಲ ತಂದೆ, ತಾಯಿಗಳ ಪಾತ್ರದ ಬಗೆಗೆ ಮಾತ್ರ ಬೆರಳಿಟ್ಟು ಅಪರಾಧಕ್ಕೆ ಕಾರಣ ಅರಸುವುದು ಅಪೂರ್ಣ ಅಧ್ಯಯನವಾಗುತ್ತದೆ.

ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡರೂ ಮಗು ಸಣ್ಣದಿರುವಾಗ, ಹೊರಗೆ ದುಡಿಯಲು ಹೋಗುವ ತಾಯಿ ಅದಕ್ಕೆ ತಿದ್ದಲಾಗದ ಹಾನಿ ಮಾಡುತ್ತಾಳೆ ಎಂಬ ಅಂಶ ಮನಸ್ಸಿನಲ್ಲೆಲ್ಲೋ ಸುಳಿಯುತ್ತಲೇ ಇರುತ್ತದೆ. ಆದ್ದರಿಂದ "ಒಳ್ಳೆಯ" ತಾಯಿಯೆಂದರೆ ಅವಳು ಯಾವಾಗಲೂ ತನ್ನ ಮಗುವನ್ನು ಪ್ರೀತಿಯ ಹೊದಿಕೆಯಲ್ಲಿ ಸುತ್ತಿ. ಮಗುವಿನ ಪ್ರತಿಯೊಂದು ಚಿಕ್ಕ ಪುಟ್ಟ ಆಸೆಗಳನ್ನು ಈಡೇರಿಸಿ. ಮುಂದೊದಗಬಹುದಾದ ಎಲ್ಲಾ ಅನಾಹುತಗಳನ್ನು ಎದುರಿಸಲು ಮಗುವನ್ನು ಸಿದ್ಧ ಮಾಡಿ, ಮಗುವು ಮುಂದೆ ಕೇಳಬಹುದಾದ ಎಲ್ಲಾ ಬೇಡಿಕೆಗಳನ್ನು ನಿರೀಕ್ಷಿಸುತ್ತಾ ಬೆಳೆಸುವವಳು. ಅವಳು ತನ್ನ ಮಗುವನ್ನು ಸಂತೋಷವಾಗಿಡಲೆಂದೇ ತನ್ನ ಶಕ್ತಿ ಮೀರಿ ಪ್ರಯತ್ನಿಸುತ್ತಿರುವುದಾಗಿ ಪ್ರಾಮಾಣಿಕವಾಗಿ ನಂಬಿರುತ್ತಾಳೆ. ಆದ್ದರಿಂದಲೇ ಮಗುವೊಮ್ಮೆ ಬೆರಳು ಚೀಪಿದರೆ ಹಾಸಿಗೆ ಒದ್ದೆ ಮಾಡಿದರೆ ಇತರ ಮಕ್ಕಳೊಡನೆ ಜಗಳವಾಡಿದರೆ, ಕೊನೆಗೆ ಬೆಳೆದು ನಿಂತಾಗ ತನಗೇ ತಿರುಗಿಬಿದ್ದರೆ. ಮಗುವನ್ನು ಬೆಳೆಸುವಲ್ಲಿ ತಾನೆಲ್ಲಿ ಎಡವಿದೆ ? ಎಂದು ಕಾತುರಳಾಗುತ್ತಾಳೆ. ಇದು ಇನ್ನೊಂದು ಮುಖವನ್ನೂ ಪಡೆಯಬಹುದು. ತಾಯಿಯ ಬೆಚ್ಚನೆಯ ಆಸರೆಯಲ್ಲಿ ಬೆಳೆದ ಮಗು ಅತ್ಯಂತ ಪುಕ್ಕಲಾಗಿ ಅಮ್ಮನನ್ನೇ ಅಂಟಿಕೊಂಡಿರುವ ಅಂಟುಪುರಲೆಯಾಗಿ ಬೆಳೆದರೆ ಆಗಲೂ ತಾಯಿ ತಾನೆಲ್ಲೋ ಎಡವಿದೆ, ಎಂದು ಆತಂಕಗೊಳ್ಳುತ್ತಾಳೆ.

ಕೆಲವರು ತಮ್ಮ ಮಕ್ಕಳ ಬೆಳವಣಿಗೆಯಲ್ಲಿ ದೊಡ್ಡವರು ಸಕ್ರಿಯವಾಗಿ ಮಧ್ಯೆ ಪ್ರವೇಶಿಸಿ ಭಾಗವಹಿಸಲಿ ಎಂದು ಬಯಸುತ್ತಾರೆ. ಕುಟುಂಬದೊಂದಿಗೆ ಆತ್ಮೀಯವಾದ ಪ್ರೌಢ ಸ್ನೇಹಿತರು ಈ ರೀತಿ ಮಧ್ಯೆ ಪ್ರವೇಶಿಸಿ ಆಗಿಂದಾಗ್ಗೆ ಉದ್ಭವಿಸುವ ಮಕ್ಕಳ ಅಗತ್ಯಗಳನ್ನು ಹಾಗೂ ಅವಶ್ಯಗಳನ್ನೂ ಹಾಗೂ ಅವಶ್ಯಕತೆಗಳನ್ನು ಈಡೇರಿಸಲು ನೆರವಾದಾಗ ಮಕ್ಕಳಿಗೆ ಒಂದು ರೀತಿಯ ಅಂತರವನ್ನು ಕಾಯ್ದುಕೊಳ್ಳುವ ಹಾಗೂ ದೊಡ್ಡವರ ಮತ್ತು ಮಕ್ಕಳ ಸಂಬಂಧ ಎಷ್ಟಿರಬೇಕು ಮತ್ತು ಹೇಗಿರಬೇಕು ಎಂಬುದನ್ನು ನಿರ್ಧರಿಸುವ ಸಾಮರ್ಥ್ಯ ಉಂಟಾಗುತ್ತದೆ. ಈ ರೀತಿಯ ಮಕ್ಕಳನ್ನು ಬೆಳೆಸುವ ಪದ್ಧತಿಯನ್ನು ಹಲವಾರು ಕುಟುಂಬಗಳು ಅಪ್ರಜ್ಞಾಪೂರ್ವಕವಾಗಿ ಬೆಳೆಸಿಕೊಂಡಿರುವುದನ್ನು ಕಾಣಬಹುದು. ಇದನ್ನು ಒಂದು ರೀತಿಯಲ್ಲಿ "ಆರೋಗ್ಯಕರವಾದ ಅನಾದರ" ಎಂದರೂ ಸರಿಯೇ ಅಂದರೆ ಇಲ್ಲಿನ ಬಹು ಮುಖ್ಯ ಅಂಶ, ತಾಯಿ ಮಗುವಿನ ಸಂಬಂಧವು ಅತಿಯಾಗಿ ವ್ಯಾಪಿಸುವುದರಿಂದ ಆಗಬಹುದಾದ ದುಷ್ಟ ಪರಿಣಾಮವನ್ನು ತಡೆಯುವುದೇ ಆಗಿದೆ. ಹೀಗಾಗುವುದರಿಂದ ಮಗುವು ಹೆತ್ತವರ ನಿರೀಕ್ಷೆ ಆಕಾಂಕ್ಷೆಗಳನ್ನು ಈಡೇರಿಸಬೇಕಾದ ಜವಾಬ್ದಾರಿಯಿಂದ ಪ್ರೀತಿ, ತ್ಯಾಗಗಳನ್ನು ಹಿಂತಿರುಗಿಸಬೇಕಾದ ಕರ್ತವ್ಯದಿಂದ ಮುಕ್ತನಾಗಬಹುದಾದ ಅವಕಾಶವೂ ಸಿಕ್ಕುತ್ತದೆ. ಹೀಗೆ ಮಾಡುವುದರಿಂದ ತಾಯಿಯು ಮಗುವಿನ ದೃಷ್ಟಿಯಲ್ಲಿ ಕೂಡ ಅವಳು ತೀರಾ ಅನಿವಾರ್ಯವೆಂತಲೂ ಹಾಗೂ ಅವಳ ಸಮಯ ಮತ್ತು ಕಾಳಜಿಯನ್ನೆಲ್ಲಾ ಮಗುವಿಗಾಗಿ ಬಳಸದೆ ಸ್ವಾರ್ಥಕ್ಕಾಗಿಯೇ ಬಳಸಿಕೊಳ್ಳುತ್ತಾಳೆ, ಎಂಬ ಆಪಾದನೆಯಿಂದ ಮುಕ್ತಳಾಗುತ್ತಾಳೆ. ಹಾಗೆಯೇ ತಾಯಿಯೂ ಕೂಡ ಮಗುವಿನ ಕಲ್ಯಾಣಕ್ಕಾಗಿ ಅವಳೆಲ್ಲಾ ಕಾಳಜಿ ಪರಿಶ್ರಮವನ್ನು ವ್ಯಯಿಸಿ, ಮಗುವು ಒಂದು ವೇಳೆ ತಾಯಿಯ ನಿರೀಕ್ಷೆಗಳನ್ನು ಸಂಪೂರ್ಣಗೊಳಿಸಲು ವಿಫಲವಾದಾಗ ಅದನ್ನು ಹಗುರವಾದ ಮನದಿಂದ, ಆರೋಗ್ಯಕರವಾದ ದೃಷ್ಟಿಯಿಂದ ನೋಡಬಲ್ಲ ಸಾಮರ್ಥ್ಯ ಹೊರಬೇಕಾಗುತ್ತದೆ. ಹೀಗೆ ನಮ್ಮ ಮಕ್ಕಳಿಂದ ನಾವು ಅಂತರವನ್ನು ಕಾಯ್ದುಕೊಳ್ಳಬಲ್ಲ ಸಾಮರ್ಥ್ಯ ಪಡೆಯುವಲ್ಲಿ ಯಶಸ್ವಿಯಾದರೆ ಹಾಗೂ ಅವರು ನಮ್ಮ ಪ್ರತಿಬಿಂಬದಂತಾಗಲಿ ಎಂಬ ಒತ್ತಡದಿಂದ ಅವರನ್ನು ಮುಕ್ತಗೊಳಿಸಲು ಸಾಧ್ಯವಾದರೆ, ಆಗ ನಾವು ಅವರನ್ನು ಯಾವುದೇ ಕ್ರೌರ್ಯವಿಲ್ಲದ ಪ್ರೀತಿಸುತ್ತಿರುತ್ತೇವೆ. ಅಷ್ಟೇ ಅಲ್ಲ ನಮ್ಮನ್ನು ನಾವು ವಿಮೋಚನೆಗೊಳಿಸಬಲ್ಲ ಹಾದಿಯತ್ತ ಸಾಗುತ್ತಿರುತ್ತೇವೆ.

ಅನು - ಶೀಲಾ ಮಳಿಮಠ್



# ಸ್ವಾಗತಾರ್ಹ ಸಂಗ್ರಹ

☐ ಬಿ. ಪ್ರೈ. ಲಲಿತಾಂಬ

ಮಹಿಳಾವಾದಿ ದೃಷ್ಟಿಕೋನದ ಮಹಿಳೆಯರ 25 ಕವನಗಳು ಈ ಸಂಗ್ರಹದಲ್ಲಿವೆ. ಈ ಹಿಂದಿನ ಸುಮಾರು 12 ದಶಕದಲ್ಲಿ ತೆಲುಗಿನ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾದ ಕವನಗಳು ಇಲ್ಲಿವೆ. ಸಂಪಾದಕರು ಪೀಠಿಕಾ ಭಾಗದಲ್ಲಿ ಹೇಳಿಕೊಂಡಿರುವಂತೆ "ಮಹಿಳಾವಾದಿ" ಭಾವನೆಯನ್ನು ಗಮನಿಸಿ ಸಂಗ್ರಹಿಸಿರುವ ಬಹುಶಃ ತೆಲುಗು ನಾಡಿನ ಮೊದಲ ಸಂಗ್ರಹವಿದು. ಈ ಕವನಗಳನ್ನು ಒಟ್ಟುಗೂಡಿಸುವಾಗ ವಿಷಯ, ಕವಯತ್ರಿ, ಕಾಲ ಹೀಗೆ ಯಾವುದಕ್ಕೂ ಒಂದು ಕ್ರಮವನ್ನು ಇಲ್ಲಿ ಅನುಸರಿಸಿಲ್ಲವಾದ್ದರಿಂದ ದೃಷ್ಟಿಕೋನವನ್ನು ವಿಶ್ಲೇಷಿಸುವಲ್ಲಿ ತೊಡಕುಂಟಾಗುವುದು ಖಂಡಿತ, ಹಾಗಿದ್ದೂ ಈ ಎಲ್ಲ ಕವನಗಳಲ್ಲೂ ಮಹಿಳೆಯರು ತಮ್ಮ ಮೇಲೆ ನಡೆಯುತ್ತಿರುವ ಶೋಷಣೆಯನ್ನು ಗುರುತಿಸಿಕೊಂಡಿರುವುದು ಅವರ ಜಾಗೃತಿಯ ಸಂಕೇತವಾಗಿದೆ.

> **ಗುರಿಚೂಸಿ ಪಾಡೆ ಪಾಟ**
> **ಸ್ತ್ರೀವಾದಿ ಕವಿತಲು**
> **ಪ್ರ : ಕವಿತ್ವ ಪ್ರಚುರಣಲು, 1990**
> **ಪುಟಗಳು : 63 ಬೆಲೆ : 10 ರೂ.**

ಶೋಷಣೆಯ ಹಲವು ಮುಖಗಳನ್ನು ಗುರುತಿಸುವಾಗ ಇಲ್ಲಿರುವ ಬಹುಪಾಲು ಕವನಗಳಲ್ಲಿ ಸಂಬಂಧದ ಸಹಜತೆಯನ್ನು ಸ್ವೀಕರಿಸಿ ಹೆಣ್ಣನ್ನೂ ಈ ಸಂಬಂಧಕ್ಕೆ ಜವಾಬ್ದಾರಳನ್ನಾಗಿಸಿ ನಂತರದಲ್ಲಿ ಅವಳು ತುಳಿತಕ್ಕೆ ಒಳಗಾಗಿ ಬಾಧೆ ಪಡುವುದನ್ನು ಗುರುತಿಸುವುದು ಸಮಾಜ ಪರಿವರ್ತನೆಯ ಆರೋಗ್ಯಕರ ಹಂತವಾಗಿದೆ. ಅಂತೆಯೇ ಕೊಂಡೆ ಪೂಟಿ ನಿರ್ಮಲಾರವರು ಹೇಳದೆ ಕೇಳದೆ ಬರುವ 12ರ ಹರೆಯವನ್ನು ಗುರುತಿಸಿ ಆಕೆಯ ಆಸೆ-ಆಕಾಂಕ್ಷೆಗಳು ತಾಯ್ತನದ ಹಂಬಲವನ್ನು ಒಪ್ಪಿಕೊಳ್ಳುತ್ತಾರೆ, ಆದರೆ ಸಮಾಜದಲ್ಲಿ ಆಕೆಯ ಸ್ಥಾನ ಮಾನವನ್ನು ಕುರಿತಂತೆ ವಿಚಾರ ಮಾಡಿದಾಗ, ಮಧ್ಯ ವಯಸ್ಸಿನ ಹೆಣ್ಣನ್ನು "ನಿನಗೇನು ತಿಳಿಯುವುದಿಲ್ಲ ನೀನು ಸುಮ್ಮನಿರು" ಎಂದು ಹೇಳುವ ಬಂಧುಗಳ ಮುಂದೆ ಮನಸ್ಸನ್ನು ಬೈಲು ಮಾಡಿಕೊಳ್ಳುವ "ರಾಜಿ"ಯ ಸಂಕೇತವಾಗುತ್ತಾಳೆ. ವೀಳ್ಯದ ಎಲೆಯ ಮೇಲೆ ಅಡಿಕೆಯನ್ನಿಟ್ಟು ಮಡಿಸಿ ಕೊಡುವ ಹಾಗೆ ತನ್ನೆಲ್ಲ ಭಾವನೆಗಳನ್ನು ಅದುಮಿಟ್ಟು Dear ಹಾಗೂ Darling ಎಂಬ ಪದಗಳ ನಡುವೆ ಹೊರಳಾಡುವ ಹೆಣ್ಣಿನ ಜೀವನಕ್ಕೆ ನೋಗಕ್ಕೆ ಹಾಕಿದ ಮೂಕ ಎತ್ತಿನೊಂದಿಗೆ ಹೋಲಿಸುತ್ತಾರೆ. 1

ಜಯಪ್ರಭಾರವರ ಕವನಗಳಲ್ಲಿ ಒಂದು ಆಶಾವಾದಿ ದೃಷ್ಟಿ ಕೋಣ ಹಾಗೂ ಕ್ರಿಯಾತ್ಮಕ ಪ್ರತಿಭಟನೆಯ ಧ್ವನಿ ಎದ್ದು ಕಾಣುತ್ತದೆ. ತೋರಿಸಲೆಂದೇ ಹೊರಟಾಗ ಕಾಣದ ವರ್ಗಭೇದವು ಕಣ್ಣಿನಲ್ಲಿ ಲಕ್ಷ ವರ್ಗಗಳಲ್ಲಿ ತನ್ನನ್ನು ಗುರುತಿಸಿಕೊಳ್ಳುತ್ತದೆ ಎನ್ನುವ ಅವರು ಇದರಿಂದ ಒಮ್ಮೊಮ್ಮೆ ಭಯವಾಗಿ ಸುದೂರ ಆಕಾಶದಲ್ಲಿ ಶೂನ್ಯ ಲೋಕದಲ್ಲಿ ಮಾಯವಾಗಿ ಹೋಗಬೇಕೆನಿಸುವ ಮನಸ್ಸಿನ ಗಾಸಿಯನ್ನು ಪ್ರಕಟಪಡಿಸುತ್ತಾರೆ. ಆದರೆ "ಪಲಾಯನಂ ಪರಿಷ್ಕಾರಂ ಕಾದನಿ" ಮುಳ್ಳಿನ ತೀಕ್ಷ್ಣತೆಯನ್ನು ಕಣ್ಣಿನಲ್ಲಿ ಹಾಕಿಕೊಳ್ಳಬೇಕೆನ್ನುತ್ತಾರೆ. ಮೈಯೆಲ್ಲಾ ಮುಳ್ಳಾಗುವ ದಿನಕ್ಕಾಗಿ ಆಕೆ ಕಾಯುತ್ತಾರೆ. 2

ವಿಮಲಾ ಹೆಣ್ಣಿನ ಜೀವನವನ್ನು ಅಡಿಗೆ ಮನೆಯ ಜೊತೆ ಸಂಕೇತಾತ್ಮಕವಾಗಿ ಒಂದಾಗಿಸಿ "ತರಹ ತರಹೆಯ ಶವಗಳು ನೀಡಿದ ಸ್ಮಶಾನದಲ್ಲಿ ನಮ್ಮ ಅಡಿಗೆ" ಎಂದು ಟೀಕಿಸುತ್ತಾರೆ. ಸಮಾಜದ ಪರಿವರ್ತನೆಯನ್ನು ಕುರಿತಂತೆ ನಮ್ಮಮ್ಮ ಹೊಗೆಯ ಮಧ್ಯೆ ಅಡಿಗೆ ಮಾಡುತ್ತಿದ್ದ ಕಾಲ ... ... ಈಗ ನಾನು ಗ್ಯಾಸ್, ಗ್ರೈಂಡರ್, ಸಿಂಕ್ ಇಟ್ಟುಕೊಂಡಿದ್ದೇನೆ", ಈಗ ನಾನು ಕೇಕ್ ಪುಡಿಂಗ್ಸ್ ಮಾಡುತ್ತಿದ್ದೇನೆ, ಆದರೂ ಮನೆಯ ಬಟ್ಟಲುಗಳ ಮೇಲೆ ಮಾತ್ರ

(1) "ಹೃದಯಾನಿಕಿ ಬಹುವಚನಂ" "ತೆಲ್ಲಾಕಟ್ಟಿಕಿವ ತಲ", "ಲೇಬರ್ ರೂಂ"_ಕೊಂಡಪೂಡಿ ನಿರ್ಮಲಾ
(2) "ಚೂಪುಲು", "ಪೈಟನಿ ತಗಲೆಯ್ಯಾಲಿ" "ಸ್ಪರ್ಶಾ ನುರಾಗಾನ್ನಿ ಆಲಪಿಸ್ತೂ".

ಇನ್ನೂ ನನ್ನ ಗಂಡನ ಹೆಸರೇ ಇದೆ. ನಾನು ಅಲಂಕರಿಸಿದ ಅಡಿಗೆಯಂತೆ ಕೀಲಿ ಕೊಟ್ಟ ಗೊಂಬೆಯಂತೆ ಇಲ್ಲಿ ತಿರುಗುತ್ತಾ ಇದ್ದೇನೆಂದು" ಹೇಳುವಲ್ಲಿ ಸಮಾಜದಲ್ಲಿ ಹೆಣ್ಣಿನ ಸ್ಥಿತಿಯ ತಟಸ್ಥತೆಯನ್ನು ಗುರುತಿಸುತ್ತಾರೆ. 3

ಓಲ್ಗಾ ಭಾರತೀಯ ಮಹಿಳೆಯನ್ನು ಪರಿಭಾಷಿಸುವಲ್ಲಿ ಶೋಷಣೆಗೆ ಪುರುಷರನ್ನು ನೇರವಾಗಿ ಗುರಿಯಾಗಿಸುತ್ತಾರೆ "ರುಬ್ಬುವ ಪಾತ್ರೆಯಲ್ಲಿ ತಲೆತಿರುಗುತ್ತಲೇ ಇರುವ ಆಲೋಚನೆಗಳ ಬೇಳೆ ಮೆದುಗುವುದೇ ಇಲ್ಲ". ನಮಗೆ ನಿಮ್ಮನ್ನು ಸುಖಪಡಿಸುವುದೊಂದೇ ಗೊತ್ತಿರುವುದು ಅದಕ್ಕೆ ನನ್ನ ಛಾಪು ಸಾಯುತ್ತಿರುವವರದ್ದು" ಎಂದ ಹೇಳಿ "ನ್ಯಾಯವಾದ ದಾಸ್ಯಕ್ಕೆ ಬಲಿಯಾದ ನಾನು ಭಾರತದ ಮಹಿಳೆ" ಎನ್ನುತ್ತಾರೆ. 4

ಚಿಕ್ಕ ವಯಸ್ಸಿನಿಂದ ಮದುವೆಯೆಂದರೆ ಮಹಾ ಶಿಕ್ಷೆ ಎಂಬ ಭಾವನೆ ಬೆಳೆಸಿ ನಮ್ಮನ್ನು, ಪುರುಷ-ಮಹಿಳೆಯರನ್ನು ವಿಭಜಿಸಿರುವ ಸಮಾಜವನ್ನು ಸಾವಿತ್ರಿಯವರೂ "ಈ ಕಾಮ-ಮೋಕ್ಷ ಮೋಕ್ಷ-ಕಾಮ ಆಸೆಗಳ ಅಗ್ನಿಗೋಳ ಮಹಾರಣ್ಯದಲ್ಲಿ ಸೌಂದರ್ಯ ಕೇಳಿಗಳಲ್ಲಿ ಸುಟ್ಟು ಬೆಳಕಾಗಿ, ಬೆಳಕಾಗಿ ಸುಟ್ಟು ಕತ್ತಲಿಸಿ ತಣ್ಣಗಾಗುವ" ಮಹಿಳೆಯ ಜೀವನದ ಚಿತ್ರವನ್ನು ರೇವತಿದೇವಿ ನೀಡುತ್ತಾರೆ. 6

ಈಚಿನ ಈ ಕವನಗಳ ಒಂದು ವಿಶೇಷ ತತ್ವವೆಂದರೆ ಜೀವನದ ಆಟಗಳಿಗೆ ಪುರುಷನೊಬ್ಬನನ್ನೇ ಗುರಪಡಿಸದೆ ತನ್ನನ್ನೂ ಗುರಿಯಾಗಿಸಿ, ನಂತರದ ಪರಿಣಾಮಗಳಿಗೆ ಸಮಾಜದ ದೃಷ್ಟಿಕೋನವನ್ನು ಬಯಲಿಗೆಳೆಯುವುದೆನ್ನಬಹುದು. ಘಂಟಸಾಲ ನಿರ್ಮಲಾರ, ರಾತ್ರಿಯ ವೇಳೆಯಲ್ಲಿ ನಲ್ಲನೊಡನೆ ಸರಸ ಕ್ರೀಡೆಯಲ್ಲಿ ತೊಡಗಿ, "ತೃಪ್ತಿ ವಜ್ರ ತುಳುಕುವಂತಿರುವುದನ್ನು" ಒಪ್ಪಿ ಇಷ್ಟೆಲ್ಲಾ ಜರುಗಿ ಹೋದ ನಂತರ ಹಠಾತ್ತಾಗಿ ಹೂವಿನ ಪರಿಮಳ ಅಷ್ಟಕ್ಕೇ ಆವಿಯಾಗುತ್ತದೆ. ಕಳೆದು ಹೋದ ಕನಸುಗಳಿಗಾಗಿ ಕಣ್ಣುಗಳು ಬಿಕ್ಕಳಿಸುತ್ತವೆ. ಯಥಾರ್ಥದ Anti Climax ಹೇಗೋ ಎದುರಿಗೆ ಬಂದು ನಿಲ್ಲುತ್ತದೆ. ನಿಜ ಬೆಂಕಿಯ ಕಿಡಿಯಾಗಿ ಹಾರುತ್ತದೆ" ಎನ್ನುವಲ್ಲಿ ಸಮಾಜದ ಪರಿವರ್ತನೆಗೆ ಒಂದು ಪರೋಕ್ಷವಾದ ಕರೆ ಇದೆಯೆನ್ನಬಹುದು. ಗಂಡಸಿಗೆ ತನ್ನ ದೇಹವನ್ನು ಧಾರೆ ಎರೆಯುವ ಹೆಣ್ಣನ್ನು ಅಸಹ್ಯದಿಂದ ಕೂಡಿದ ಕಣ್ಣಿನ ನೋಟ" ನೀಡುವ ಆ ಸಮಾಜಕ್ಕೆ ಅಧಮತ್ವದ ಪ್ರತೀಕವೆನ್ನುವಲ್ಲಿ ಆಕೆ ಆತ್ಮ ನಿರೀಕ್ಷಣೆಗೆ ಕರೆ ನೀಡುತ್ತಾರೆ.

"ಸರ್ವ ಪರಿಷ್ವಂಗಂ"–ಮಂದಕಪು ಹೇಮಾವತಿ, ಪಾರ್ವತಿಯವರ "ಸಿಗ್ಗು–ಸಿಗ್ಗು" "ಆತ್ಮಹತ್ಯ-ನಾ-ನಿರಸನ ರಾವುಲಪಲ್ಲಿ ಸುನೀತ, ಹಾಗೂ ಶಿವಲೆಂಕ ರಾಜೇಶ್ವರೀ ದೇವಿಯವರ "ದ್ವೈತಂ" ಕವನಗಳಲ್ಲಿ ತನ್ನನ್ನು ಹುರಿದು ತಿನ್ನುವ ಗಂಡನಿಗೆ ತಲೆಬಾಗಿ ನಿಂದಿರುವ, ರಾಜಿಯ ಭಾವನೆ ಹೊಂದಿರುವ ಹೆಣ್ಣಿನ ಚಿತ್ರ ಚಿತ್ರಿತವಾಗಿದೆ. ಹಾಗೂ "ನನ್ನನ್ನು ಈ ನಿಶ್ಶಬ್ದ ಸಮಾಧಿಯಿಂದ ಎತ್ತುವವರು ಯಾರು........ನಾನೂ ಒಬ್ಬ ಮನುಷ್ಯಳೆಂದೇ ಗುರಿತಿಸದೇ-ನನ್ನ ಕಣ್ಣುಗಳು ಮರುಗಿದವು, ಬೇಡ, ಇನ್ನು ತಟ್ಟಬೇಡ. ನನ್ನನ್ನು ಎಬ್ಬಿಸಬೇಡ ಈ ಸಮಾಧಿಯಲ್ಲೇ ಸಾಯುತ್ತೇನೆ" ಎನ್ನುವ ಶಿಲಾಲೋಲಿತೆಯ ವಾಕ್ಯಗಳಲ್ಲಿ ನೈಜ ಸ್ಥಿತಿಯ ವಿರಾಮ ಚಿನ್ಹೆಯನ್ನು ಗುರುತಿಸಬಹುದು ವಾಣಿ ರಂಗಾರಾವ್‌ರವರ " ಶೀವಾಚಿ " ಪಾಡಿಬಂಡ್ಲ

---

(3) "సౌందర్యాత్మక హింస" వంటిల్లు : విమల

(4) "గృహలక్ష్మి" మోహంది స్త్రీల విజ్ఞప్తి : "ప్రతి స్త్రీ ఒక నిర్మల కావాలి"–ఓల్గా

(5) బందిపాటల్లు : సావిత్రి

(6) అనురాగ దగ్ధ సమాధి : రేవతి దేవి

ರಜನಿಯವರ ಅಬಾರ್ಶನ್ ಸ್ಟೇಟ್‌ಮೆಂಟ್ ಕೂಡ ಇಂತಹ ಕವನಗಳೇ. ವಿಷಯ ವೈವಿಧ್ಯತೆಗಳೆಂದರೆ ರಾವುಲಪಲ್ಲಿ ಸುನೀತಾರವರ "ಅಮ್ಮ ಅಲಿಗಿಂದಿ," ಪ್ರೀತಿಯನ್ನು ನೀಡುತ್ತಿದ್ದ ಅಮ್ಮ ಇನ್ನಿಲ್ಲ: ಹಾಗೂ ಕೊನೆಯ ಜನಪದ ಕವಿತೆಯ ಸಂಘಂ ಚೇರುದಾಂ ಅನ್ನಬಹುದು. "ಗುದ್ದಲಿಯನ್ನು ಕೈಲಿ ಹಿಡಿದು ಗಡಿಯ ಮುಂದೆ ನಿಂತುಕೊಂಡರೇ, ಗುದ್ದಲಿಯನ್ನು ನೋಡಿ ಗಂಡ ಗೋಡೆ ಧುಮುಕಿ ಓಡಿ ಹೋದ" ಎನ್ನುವಲ್ಲಿ ಸಂಘಶಕ್ತಿಯ ಕಡೆಗೆ ಎಚ್ಚರವಿದೆ 8

ಈ ಸಂಕಲನದ ಒಂದು ದೀರ್ಘ ಕವನ "ನಿರೀಕ್ಷಣ" ವಸಂತ ಪನ್ನಬಿರಾವ್‌ರವರು ಇಂಗ್ಲೀಷ್‌ನಲ್ಲಿ ರಚಿಸಿ ಓಲ್ಗಾದಿಂದ ತೆಲುಗಿಗೆ ಬಂದಿದೆ. ಹೆಣ್ಣಿನ ಒಂಟಿತನವನ್ನು ತೀವ್ರವಾಗಿ ಗುರುತಿಸುವ ಅವರು ನಾನು ತೆಗೆದುಕೊಳ್ಳುವ ಉಸಿರು, ನಾನು ಮಾಡುವ ಅಡಿಗೆ ಸನ್ನ ರಕ್ತನಾಳ ಸ್ಪಂದನ ಇವೆಲ್ಲವೂ ನನ್ನ ಅಗತ್ಯಕ್ಕಾಗಿಯೇ ಇವೆ ಅಂದ ಮೇಲೆ ನನ್ನತನ ಏನುಳಿಯಿತೆಂದು ಪ್ರಶ್ನಿಸುತ್ತಾರೆ.

ಒಟ್ಟಿನಲ್ಲಿ ಹೇಳುವುದಾದರೆ ಜನಪದ ಕವಿತೆಯೊಂದನ್ನು ಬಿಟ್ಟು ಉಳಿದು, ಈ ಸಂಗ್ರಹದ ಎಲ್ಲ ಕವನಗಳಲ್ಲೂ ಹೆಣ್ಣು ತನಗಾಗುತ್ತಿರುವ ಶೋಷಣೆಯನ್ನು ಗುರುತಿಸಿ ಕೊಂಡಿರುವುದು ಕಂಡುಬರುತ್ತಿದ್ದರೂ ಅವಕ್ಕೆ ಪರಿಹಾರವನ್ನು ಸೂಚಿಸುವ ಕಡೆ ವಿಚಾರ ಸುಳಿಯದಿರುವುದೂ, ಮತ್ತು ನಿರಾಶಾವಾದಿ ಭಾವನೆಗಳೂ ತುಡಿಯುತ್ತಿರುವುದೂ ಗಮನಿಸಬೇಕಾದ ಅಂಶವೆನ್ನಬಹುದು. ಪುರುಷನನ್ನು ದ್ವೇಷಿಸುವ ಭಾವನೆ ಇಲ್ಲದಿರುವುದು ಆರೋಗ್ಯಕರವಾದ ಅಂಶವೆಂದು ಗುರುತಿಸಬಹುದಾದರೂ ಶೋಷಣೆಯ ಪರಿಹಾರದ ದಿಕ್ಕಿನಲ್ಲಿ ಚಿಂತನೆ ಶೂನ್ಯವಾಗಿರುವುದು ನಿರಾಶಾದಾಯಕವಾದ ಅಂಶವೆನ್ನಬಹುದು.

ಮಹಿಳಾವಾದದ ಹಿನ್ನೆಲೆಯಲ್ಲಿ ತಮ್ಮ ಸ್ಥಿತಿಯನ್ನು ಗುರುತಿಸಿಕೊಳ್ಳುವುದು ಅತಿ ಅಗತ್ಯವಾದುದರಿಂದ ಇಂತಹ ಕವನಗಳು ಸ್ವಾಗತಾರ್ಹವಾದುವೇ. O

---

(7) "ಜುಗಲ್ ಬಂದಿ" "ಎ ಕಾಲ್ ಗರ್ಲ್ಸ್ ಮಾನೋಲಾಗ್" : ಘಂಟಸಾಲ ನಿರ್ಮಲ

(8) ಜನಪದ ಕವಿತ

---

# ಬಹಿರಂಗ ಚರ್ಚೆ ಅಗತ್ಯ

ಪರಸ್ಪರ ದ್ವೇಷ, ವೈರತ್ವಕ್ಕೆ ಹೆಣ್ಣು ಬಲಿಯಾಗುತ್ತಿದ್ದಾಳೆ. ಇತ್ತೀಚಿನ ದಿನಗಳಲ್ಲಿ ಅತ್ಯಾಚಾರದ ಸಂಖ್ಯೆ ಹೆಚ್ಚುತ್ತಿರುವುದೇ ಇದಕ್ಕೆ ಉದಾಹರಣೆ. ಕೆಲವು ದಿನಗಳ ಹಿಂದೆ ಪತ್ರಿಕೆಗಳಲ್ಲಿ ಒಂದು ವರದಿ ನೋಡಿದೆ ಕಾಲೇಜು ವಿದ್ಯಾರ್ಥಿನಿಯೊಬ್ಬಳ ಮೇಲೆ ಅತ್ಯಾಚಾರ ಯತ್ನ (ಧಾರವಾಡ ಸಮೀಪ) ಸಣ್ಣ ಗ್ರಾಮವೊಂದರಿಂದ ಸಮೀಪದ ಪಟ್ಟಣಕ್ಕೆ ಓದಲು ಹೋಗುತ್ತಿದ್ದ ಈಕೆಯನ್ನು ಗುಂಪೊಂದು ಎಳೆದುಕೊಂಡು ಹೋಗಿ ಬೆತ್ತಲೆಗೊಳಿಸಲೆತ್ನಿಸಿತೆಂದೂ ವರದಿಯಾಗಿದೆ. ಒಂದು ಗುಂಪು ಚುಡಾಯಿಸುತ್ತಿದ್ದುದನ್ನು ಆಕೆ ಸಹೃದಯದ ಮತ್ತೊಂದು ಗುಂಪಿಗೆ ಹೇಳಿದ್ದೇ ಇದಕ್ಕೆ ಕಾರಣವೆನ್ನುವವರಿದ್ದಾರೆ. "ಚಾಡಿ ಹೇಳ್ತೀಯ" ಎಂಬುದು ಈ ಗುಂಪಿನ ಮಾತು. ಇದರಲ್ಲಿ ಮುಖ್ಯವಾದ ಅಂಶವೆಂದರೆ ಹಳ್ಳಿಯಿಂದ ಓದಲು ಹೋಗುವ ವಿದ್ಯಾರ್ಥಿನಿಯರ ಸಂಖ್ಯೆ ಮೇಲೆ ಇದು ತೀವ್ರ ಪರಿಣಾಮ ಉಂಟು ಮಾಡಬಹುದು. ಮೊದಲೇ ಶಾಲೆ, ಕಾಲೇಜುಗಳಿಗೆ ಹೆಣ್ಣು ಮಕ್ಕಳನ್ನು ಕಳುಹಿಸುವುದು ಕಷ್ಟ, ಇಂಥ ಘಟನೆಗಳು ಹೆಣ್ಣು ಮಕ್ಕಳ ಶಾಲಾ ಪ್ರವೇಶದ ಮೇಲೆ ಇನ್ನಷ್ಟು ಪ್ರಹಾರ ಕೊಡುತ್ತದೆ ಇದು ನಾಗರೀಕ ಸಮಾಜ ನಾಚಿಕೆ ಪಡುವಂಥ ವಿಷಯವಾಗಿದೆ.

---

## ಸ್ಪಂದನ

ಸಮಾಜದ ಆರೋಗ್ಯವನ್ನು ಸರಿಪಡಿಸುವ ತುರ್ತು ಕೆಲಸವಾಗಬೇಕಾಗಿದೆ. ಇದಕ್ಕೆ ಸರ್ಕಾರ ಮತ್ತು ಪೌರರು ಜತೆ ಜತೆಯಾಗಿ ಶ್ರಮಿಸಬೇಕಾಗಿದೆ. ಅತ್ಯಾಚಾರ ವಿರುದ್ಧ ತೀವ್ರ ಕ್ರಮ ಅಗತ್ಯವಾಗಿದೆ, ಅತ್ಯಾಚಾರಿಗೆ ಎಂಥ ಶಿಕ್ಷೆ ಎಂಬ ಬಗ್ಗೆ ಒಂದು ಬಹಿರಂಗ ಚರ್ಚೆಯಾಗಬೇಕು.

— ರಮಾ

# "ಅಚಲ" - ಸ್ವೀಕಾರ

**ಕೇಳು ಕನ್ಯಾಮಣಿ :** ನಾಗೇಂದ್ರಪ್ಪ ದಾಗಿನಕಟ್ಟೆ ಕಾಳಿಂಗ ಪ್ರಕಾಶನ, ದಾಗಿನಕಟ್ಟೆ, ಚನ್ನಗಿರಿ ತಾಲ್ಲೂಕು ಶಿವಮೊಗ್ಗ ಜಿಲ್ಲೆ, ಬೆಲೆ : 6 ರೂ.. ಹೆಣ್ಣು ಶೋಷಣೆಯು ಕುರಿತಂತೆ ನೂರೊಂದು ವಚನಗಳ ಪುಸ್ತಕ. ಒಂದಿಷ್ಟು ವಾಚ್ಯವಾಗುವ, ಭಾವುಕವಾಗುವ ಈ ವಚನಗಳೆಲ್ಲಾ ವರದಕ್ಷಿಣೆ, ಬಾಲ್ಯ ವಿವಾಹ. ವೈಧವ್ಯ ವಧು ಪರೀಕ್ಷೆ, ಹೀಗೆ ಹತ್ತು ಹಲವು ಶೋಷಣೆಯ ಮುಖಗಳ ತೆರೆಯಲು ಪ್ರಯತ್ನಿಸುತ್ತವೆ.

**ಅರ್ಥ :** ಭಾಗೀರಥಿ ಹೆಗಡೆ, ಸೂರ್ಯ ಪ್ರಕಾಶನ. ಮಂಚಿಕೇರಿ-581347, : ಬೆಲೆ 20 ರೂ, ಇಂದಿನ ಸಣ್ಣ ಕತೆ ಬರೆಯುವ ಲೇಖಕಿಯರಲ್ಲಿ ಗಮನಾರ್ಹರಾದ ಭಾಗೀರತಿ ಹೆಗಡೆಯವರ ಎರಡನೇ ಕಥಾ ಸಂಕಲನ ಪ್ರಾದೇಶಿಕ ಭಾಷೆಯ ಸೊಗಸು ಹೊತ್ತು, ಯಾವುದೇ ಸಂಗತಿಯನ್ನು ಕೃತಕವಾಗದಂತೆ ಹೇಳಬಲ್ಲ, ಸಂಯಮದ ನಿರ್ವಹಣೆಯ ಹನ್ನೆರಡು ಕತೆಗಳಿವೆ.

**ಗಂಟು ಮುಖಕ್ಕೆಂಟು ನಗೆ :** ತುಂಕೂರು ಸುನಂದ ತುಂಕೂರು ಸರೋಜ. ಪರ್ಣ ಪ್ರಕಾಶನ, ಎಂ, ಸಿ. ಕಾಲೋನಿ, ತು ಮ ಕೂ ರು - 2, ಬೆಲೆ : 9 ರೂ, ತುಂಕೂರು ಸುನಂದ ಹಾಗೂ ತುಂಕೂರು ಸರೋಜ ಇವರ ಮೂರನೇ ವಿಡಂಭನಾತ್ಮಕ ನಗೆ ಲೇಖನಗಳ ಸಂಗ್ರಹ, ಗಂಟು ಮುಖಕ್ಕೆಂಟು ನಗೆ ತರಿಸುವ ಪ್ರಯಾಸದ, ಒಟ್ಟು ಎಂಟು ಬರಹಗಳಿವೆ.

**ಬೀದಿ ನಾಟಕ :** ಜಿ. ಎಸ್. ಮೋಹನ್, ಪ್ರಯೋಗ ರಂಗ ಮತ್ತು ಭಾರತ ಯಾತ್ರಾ ಕೇಂದ್ರ. 25. ಅಗ್ರಹಾರ ದಾಸರಹಳ್ಳಿ, ಮಾಗಡಿ ರಸ್ತೆ, ಬೆಂ ಗ ಳೂ ರು – 79, ಬೆಲೆ : 7 ರೂ. ವಿಶಿಷ್ಟ ರಂಗ ಪ್ರಸಾರವಾದ ಬೀದಿ ನಾಟಕವನ್ನು ಕುರಿತಂತೆ ಹೊರಬಂದ ಮೊಟ್ಟ ಮೊದಲ ಪುಸ್ತಕ. ರಂಗ ಮಾಧ್ಯಮದ ಆಸಕ್ತರಿಗೆ ಸ್ಪಷ್ಟ–ನಿಖರ ಸ್ಥಿತಿಯನ್ನು, ಬಹಳಷ್ಟು ಮಾಹಿತಿಯನ್ನು ಒದಗಿಸಿದೆ.

**ಪಾಕ ವೈವಿಧ್ಯ ರಾಗಿಯ ವಿವಿಧ ರುಚಿಗಳು :** ಸಂ : ಉಷಾದೇವಿ, ಮಾಲತಿ ಶಿವಕುಮಾರ್, ಚಿನ್ಮಯಿ ಪ್ರಕಾಶನ, "ಕ್ಷಿತಿಜ" ಮಹಾಕವಿ ಕುವೆಂಪು ರಸ್ತೆ. (ಗೀತಾಂಜಲಿ ಎದುರು), ಮಲ್ಲೇಶ್ವರಂ. ಬೆಂ ಗ ಳೂ ರು - 3, ಬೆಲೆ : ರೂ. 5. ಅಗ್ಗವಾಗಿ ದೊರೆವ, ಸುಲಭವಾಗಿ ಜೀರ್ಣವಾಗುವ, ಆರೋಗ್ಯಕ್ಕೆ ಅತ್ಯುತ್ತಮವಾದ ರಾಗಿಯಿಂದ ಮಾಡಬಹುದಾದ ವಿವಿಧ ಸಿಹಿ ಹಾಗೂ ಖಾರದ ಅಡುಗೆಗಳ ತಯಾರಿಸುವ ವಿಧಾನವನ್ನು ಪುಸ್ತಕ ನೀಡಿದೆ.

**ಮರಳಿ ಬಂದ ಮಧುರ ಮಾಸ :** ಜಿ.ವಿ. ಜಯಾ ರಾಜಶೇಖರ್, ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆ, ಹುಬ್ಬಳ್ಳಿ-ಬೆಂಗಳೂರು, ಬೆಲೆ : 12 ರೂ. ಲೇಖಕಿ ಇಂಗ್ಲೆಂಡ್, ಅಮೇರಿಕಾ ದೇಶಗಳಿಗೆ ಕೈಗೊಂಡ ಪ್ರವಾಸದ ಕಥನ. ಗೃಹಿಣಿಯಾಗಿ, ಸಂಪ್ರದಾಯಸ್ಥ ಮಹಿಳೆಯಾಗಿ ಸ್ವಾರಸ್ಯಕರ ಅನುಭವಗಳ ತೆರೆದಿಡುವ ಪ್ರಯತ್ನದ ಕೃತಿ.

**ಬಿಕ್ಕುಗಳು :** ಕುಲಶೇಖರಿ, ಚಿನ್ಮಯಿ ಪ್ರಕಾಶನ, "ಕ್ಷಿತಿಜ", ಮಹಾಕವಿ ಕುವೆಂಪು ರಸ್ತೆ, (ಗೀತಾಂಜಲಿ ಎದುರು), ಮಲ್ಲೇಶ್ವರಂ, ಬೆಂಗಳೂರು–3 ಬೆಲೆ: 10ರೂ ಬಹಳಷ್ಟು ಪುಟ್ಟ ಪುಟ್ಟ ಕವನಗಳನ್ನೊಳಗೊಂಡ ಕುಲಶೇಖರಿಯವರ ಮೂರನೇ ಕವನ ಸಂಕಲನ. ಭಾವನಾತ್ಮಕ ಗುಣ ಹೊಂದಿದ ಒಟ್ಟು 38 ಕವನಗಳಿವೆ.

**ಪುಟಾಣಿಗೆ ಶರಣರ ಕತೆಗಳು :** ಜಿ. ವಿ. ಜಯಾ ರಾಜಶೇಖರ್, ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆ, ಹುಬ್ಬಳ್ಳಿ-ಬೆಂಗಳೂರು, ಬೆಲೆ:ರೂ.3-50 ಮೊಮ್ಮಕ್ಕಳಿಗೆ ಹೇಳಿದ ಶರಣರ ಕತೆಗಳನ್ನು ಮಕ್ಕಳಿಗಾಗಿ ಸಂಗ್ರಹಿಸಿದ್ದಾರೆ ಪವಾಡಗಳೇ ಪ್ರಧಾನವಾಗುವ ಬಹಳಷ್ಟು ಕತೆಗಳು ಮುಗ್ಧ ಮಕ್ಕಳ ಮನಸ್ಸಿನಲ್ಲಿ ಕುರುಡು ನಂಬಿಕೆಗೆ ಕಾರಣ ವಾಗಬಲ್ಲ ಅಪಾಯವನ್ನು ಗುರುತಿಸಿ ಶ್ರೀ ಎಚ್, ತಿಪ್ಪೇ ರುದ್ರಸ್ವಾಮಿಯವರು ಮುನ್ನುಡಿಯಲ್ಲೇ "ಶರಣರೆಂದೂ ಅಂಧಶ್ರದ್ಧೆಯ ಪುರಸ್ಕರಿಸಿದವರಲ್ಲ, ಭಕ್ತಿ - ನಿಷ್ಠೆಯ ಸಾಂಕೇತಿಕ ಅರ್ಥವನ್ನು ಮಾತ್ರ ಗ್ರಹಿಸಬೇಕು" ಎಂದು ಉಚ್ಚರಿಸಿರುವುದು ಬಹಳ ಉಪಯುಕ್ತ ಸಲಹೆಯಾಗಿದೆ.

**ಮಾಧವಿ :** ಪ್ರಖ್ಯಾತ ಲೇಖಕ ಭೀಷ್ಮ ಸಾಹನಿ ಅವರ ನಾಟಕ "ಮಾಧವಿ" ಮಹಾಭಾರತದ ಒಂದು ಕತೆಯ ಆಧಾರದ ಮೇಲೆ ಆಧಾರಿತವಾಗಿದೆ. ಕರ್ತವ್ಯ ಪಾಲನೆ ಎಂಬ ವಿಶಾಲ ಧ್ಯೇಯವನ್ನಿಟ್ಟುಕೊಂಡು ಬೇರೆ ಬೇರೆ ವ್ಯಕ್ತಿಗಳು ಬೇರೆ ಬೇರೆ ರೀತಿಯಲ್ಲಿ ಜೀವನದ ಸನ್ನಿವೇಶ ಗಳಿಗೆ ಹೇಗೆ ಓಗೊಡುತ್ತಾರೆಂಬುದನ್ನು ಶ್ರೀ ಸಾಹನಿಯ ವರು ಮನೋಜ್ಞವಾಗಿ ಚಿತ್ರಿಸುತ್ತಾರೆ, ಈ ಕೃತಿಯನ್ನು ಶ್ರೀ ಗೊರೂರು ಶ್ರೀನಿವಾಸ ಮೂರ್ತಿಯವರು ಕನ್ನಡಕ್ಕೆ ಅನುವಾದಿಸಿದ್ದಾರೆ, ಪ್ರಕಾಶಕರು ನವ ಕರ್ನಾಟಕ ಪಬ್ಲಿ ಕೇಶನ್ಸ್ ಪ್ರೈ. ಲಿಮಿಟೆಡ್, ಬೆಲೆ : ರೂ. 15

**ಮಹಿಳೆ ಬಿಡುಗಡೆಯ ಹಾದಿಯಲ್ಲಿ**

ಎನ್. ಗಾಯತ್ರಿ, ನವಕರ್ನಾಟಕ ಪ್ರಕಾಶನ. ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು–1 ಬೆಲೆ ರೂ, 18 ಹೆಣ್ಣಿನ ಸಮಸ್ಯೆಗಳ ಉಗಮ ಮತ್ತು ಅವುಗಳ ವಿವಿಧ ಸ್ವರೂಪವನ್ನು ಅಧ್ಯಯನ ಮಾಡುವ, ಈ ಸಮ ಸ್ಯೆಗಳಿಗೆ ಕಾರಣವಾದ ಶಕ್ತಿಗಳನ್ನು ಗುರುತಿಸಿ, ಅವುಗಳ ವಿರುದ್ಧ ಹೋರಾಡಲು ಬೇಕಾದ ಸಿದ್ಧಾಂತವನ್ನು ಅನ್ವೇ ಷಿಸುವ ಒಂದು ಯಶಸ್ವೀ ಪ್ರಯತ್ನ. ಸಂಘಟಿತ ಸ್ತ್ರೀ ಶಕ್ತಿಯತ್ತ ಗಮನ ಸೆಳೆವ ಕೃತಿ.

**ಅತ್ತುಬಿಡೇ ಗೆಳತಿ :** ಸಿ. ಎಸ್, ಸವಿತ, ಎಂ, ಆರ್. ಭಗವತಿ, ಸುಧಾಶರ್ಮ ಚವತ್ತಿ, ಪ್ರತಿಭಾ ಯುವ ವೇದಿಕೆ ಗಾಯತ್ರೀನಗರ, ಬೆಂಗಳೂರು–21 ಬೆಲೆ : 10 ರೂ. ಮೂರು ಯುವ ಕವಯತ್ರಿಯರ ಆರಂಭದ ಕವನಗಳು. ಈ ಸಂಕಲನದ ವಿಶೇಷವೇನೆಂದರೆ ಇದನ್ನು ಬರೆದಿರುವುದು ಗಂಡಲ್ಲ ಹೆಣ್ಣು ಎನ್ನುವುದು ಸ್ಪಷ್ಟವಾಗುತ್ತದೆ.

## ಸಾಮಾಜಿಕ ನ್ಯಾಯ

"ಮಹಿಳೆಗೆ ಸಾಮಾಜಿಕ ನ್ಯಾಯ ಸಿಗಬೇಕೆಂಬುದು ನಮ್ಮೆಲ್ಲರ ಆಶಯ, ಮಹಿಳೆಯ ಬಗ್ಗೆ ಸಮಾಜದ ಒಟ್ಟು ಧೋರಣೆಯನ್ನು ಬದಲಾಯಿಸುವುದು ಮೊದಲು ಆಗಬೇಕಾದ ಕೆಲಸ. ಮಹಿಳೆ ಎರಡನೇ ದರ್ಜೆ ಪ್ರಜೆಯಾಗಿರುವುದು ಮತ್ತು ಸಂಸಾರಕ್ಕೆ ಆರ್ಥಿ ಕವಾಗಿ ಹೊರೆಯಾಗಿರುವುದು ಅವಳು ಉತ್ಪಾದನಾ ಚಟುವಟಿಕೆಗಳಲ್ಲಿ ಪಾಲ್ಗೊಳ್ಳದಿರುವುದರಿಂದಲೇ ಉಂಟಾಗಿವೆ. ಈ ದಿಸೆಯಲ್ಲಿ ಮಹಿಳೆಯ ವಿದ್ಯಾ ಭ್ಯಾಸ ಬಹಳ ಮುಖ್ಯ ಪಾತ್ರ ವಹಿಸುತ್ತದೆ. ಆ ನಂತರ ಪ್ರತಿಯೊಬ್ಬ ಮಹಿಳೆಗೂ ಉದ್ಯೋಗಾವಕಾಶ ಗಳು ಇರಬೇಕು. ಆರ್ಥಿಕ ಸ್ವಾತಂತ್ರ್ಯ ಬಂದಾಗ ಮಾತ್ರ ನಿಜವಾದ ಅರ್ಥದಲ್ಲಿ ಮಹಿಳೆಗೆ "ಸಮಾನತೆ" ಸಿಗುವುದು ಸಾಧ್ಯ ಸಮಾಜದಲ್ಲಿ ಈ ಅರಿವು ಮೂಡಿ ಸುವ ಕಾರ್ಯವನ್ನು ನಾವು (ಮಹಿಳಾ ಸಂಘಟನೆಗಳು) ಮಾಡಬೇಕಾಗಿದೆ........"

— ಡಾ|| ಅನುಪಮಾ ನಿರಂಜನ

# ಮಹಿಳಾ ಆಯೋಗ - ಶಾಸನಬದ್ಧ ಅಧಿಕಾರ ಬೇಕು

ಒಂಬತ್ತೂವರೆ ದಶಕದ ಹಿಂದೆ ಭಾರತದಲ್ಲಿ ಮಹಿಳೆಯರ ಸ್ಥಿತಿ-ಗತಿ ಕುರಿತು ಅಧ್ಯಯನ ಮಾಡಿದ್ದ ಸಮಿತಿಯೊಂದು ಮಹಿಳೆಯರ ಅಭಿವೃದ್ಧಿಗಾಗಿ ಹಾಗೂ ಅವರ ಹಕ್ಕು ಸಂರಕ್ಷಣೆಗಾಗಿ "ಮಹಿಳಾ ಆಯೋಗ" ರಚಿಸುವಂತೆ ಅಂದಿನ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಿತ್ತು. ಅಂದಿನಿಂದಲೂ ಎಲ್ಲಾ ಮಹಿಳಾ ಸಂಘಟನೆಗಳು ಈ ಆಯೋಗದ ರಚನೆಗೆ ಸರ್ಕಾರವನ್ನು ಒತ್ತಾಯಿಸುತ್ತಲೇ ಇವೆ. ಆದರೆ ಮಹಿಳೆಯರ ಬಗ್ಗೆ ಅತ್ಯಂತ ವ್ಯಾಕುಲತೆಯಿಂದ ಮಾತನಾಡುವ ಸರ್ಕಾರಗಳು ಮಾತನ್ನು ಬಿಟ್ಟು ರಚನಾತ್ಮಕವಾಗಿ ಏನನ್ನೂ ಮಾಡಲಿಲ್ಲ.

ರಾಷ್ಟ್ರೀಯ ರಂಗ ಸರ್ಕಾರ ಈ ನಿಟ್ಟಿನಲ್ಲಿ ದಿಟ್ಟ ಹೆಜ್ಜೆ ಇಟ್ಟು ಆಯೋಗ ರಚಿಸಲು ಮುಂದಾಗಿತು, ಆಯೋಗದ ರೂಪುರೇಷೆಯ ಬಗ್ಗೆ ಜನಾಭಿಪ್ರಾಯ ಸಂಗ್ರಹಿಸಲು ರಾಷ್ಟ್ರಮಟ್ಟದಲ್ಲಿ ಹಾಗೂ ರಾಜ್ಯ ಮಟ್ಟದಲ್ಲಿ ಹಲವಾರು ಸಭೆಗಳು, ಗೋಷ್ಠಿಗಳು ನಡೆದಿವೆ. ರಾಜ್ಯಗಳಿಂದ ಅನೇಕ ಶಿಫಾರಸ್ಸುಗಳನ್ನು ಕಳುಹಿಸಲಾಗಿದೆ ಆದರೆ ಆಯೋಗ ರಚನೆಯ ಬಗ್ಗೆ ಅಧಿಕೃತ ತೀರ್ಮಾನ ಮಾತ್ರ ಪ್ರಕಟವಾಗಿಲ್ಲ.

ಜನವಾದಿ ಮಹಿಳಾ ಸಂಘಟನೆಯು ಈ ಆಯೋಗವು ಇತರೆ ಆಯೋಗಗಳಿಗಿಂತ ಹೆಚ್ಚು ಅರ್ಥಪೂರ್ಣವಾಗಬೇಕಾದರೆ ಇದಕ್ಕೆ ಶಾಸನಬದ್ಧ ಅಧಿಕಾರ ನೀಡಬೇಕು ಎಂದು ಒತ್ತಾಯಿಸಿದೆ.

ಸ್ವಾತಂತ್ರ್ಯ ನಂತರದಲ್ಲಿ ಹಲವಾರು ಸಮಿತಿಗಳು ಹಾಗೂ ಆಯೋಗಗಳು ಮಹಿಳೆಯರ ಅಭಿವೃದ್ಧಿಗೆ ಸಂಬಂಧಿಸಿದಂತೆ ಸುಮಾರು ಎರಡೂವರೆಸಾವಿರ ಶಿಫಾರಸ್ಸುಗಳನ್ನು ಮಾಡಿವೆ. ಆದರೆ ಈ ಸಮಿತಿಗಳಾವುವೂ ಶಾಸನಬದ್ಧ ಅಧಿಕಾರ ಹೊಂದಿರಲಿಲ್ಲವಾದ್ದರಿಂದ ಈ ಶಿಫಾರಸ್ಸುಗಳನ್ನು ಜಾರಿಗೆ ತರಲೇಬೇಕಾದ ಪ್ರಮೇಯ ಸರ್ಕಾರಕ್ಕೆ ಒದಗಲಿಲ್ಲ. ಕೊನೆಗೆ ಶಿಫಾರಸ್ಸುಗಳನ್ನು ಸಂಸತ್ತಿನ ಮುಂದೆ ಮಂಡಿಸಬೇಕಾದ ಒತ್ತಡವೂ ಸರ್ಕಾರದ ಮೇಲಿರಲಿಲ್ಲ. ಆದ್ದರಿಂದ ಈ ಎಲ್ಲ ಸಮಿತಿಗಳ ಸಮಯ, ಶ್ರಮ, ಹಾಗೂ ವೆಚ್ಚ ನಿರರ್ಥಕವೆನಿಸಿರುವಂತೆ ಮಹಿಳಾ ಆಯೋಗವೂ ಹತ್ತರಲ್ಲಿ ಒಂದು ಎಂಬಂಥ ಸಂಸ್ಥೆಯಾಗುವುದು ಬೇಡ. ಆಯೋಗಕ್ಕೆ ಶಾಸನಬದ್ಧ ಅಧಿಕಾರ ನೀಡುವುದಿಲ್ಲವಾದರೆ ಆಯೋಗವೇ ಬೇಡ,

ಮಹಿಳೆಯರ ಅಭಿವೃದ್ಧಿಗಾಗಿ ಪ್ರತ್ಯೇಕ ನೀತಿ ರೂಪಿಸುವುದು ಸಮಾನತೆಗಾಗಿ ನಡೆಸಿರುವ ಹೋರಾಟವನ್ನು ಅರ್ಥಹೀನಗೊಳಿಸುತ್ತದೆ. ಪಂಚವಾರ್ಷಿಕ ಯೋಜನೆಗಳಲ್ಲಿ ಪುರುಷರೊಂದಿಗೆ ಮಹಿಳೆಯರಿಗೂ ಸಮಾನಾವಕಾಶ ದೊರೆಯುವಂತಹ ಯೋಜನೆಗಳನ್ನು ರೂಪಿಸಬೇಕು ಸರ್ಕಾರೀ ಇಲಾಖೆಗಳ ವಿವಿಧ ಯೋಜನೆಗಳ (ಮಹಿಳೆಯರಿಗೆ ಸಂಬಂಧಿಸಿದ) ಪ್ರಗತಿ ಹಾಗೂ ಯಶಸ್ಸು ಕುರಿತು ಸಮೀಕ್ಷೆ ನಡೆಸಲು ಪ್ರತಿ ಇಲಾಖೆಯಲ್ಲೂ ಪ್ರತ್ಯೇಕ ಸಮಿತಿ ರಚಿಸಿ, ಅದಕ್ಕೆ ಸಂಬಂಧಿಸಿದ ಉಪಸಮಿತಿಯೊಂದನ್ನು ಆಯೋಗದಲ್ಲಿ ರಚಿಸಬೇಕು.

ರಾಷ್ಟ್ರಮಟ್ಟದಲ್ಲಿರುವಂತೆ ಪ್ರತಿ ರಾಜ್ಯದಲ್ಲೂ ಆಯೋಗ ರಚಿಸಬೇಕು. ಇದರ ಸ್ಥಾಪನೆಗೆ ಅಗತ್ಯವಾದ ಆರ್ಥಿಕ ನೆರವನ್ನು ಕೇಂದ್ರ ಸರ್ಕಾರ ಒದಗಿಸಬೇಕು

ಆಯೋಗವು ಮಹಿಳಾ ಸಂಘಟನೆ, ಕಾರ್ಮಿಕ ಸಂಘಟನೆ, ರೈತ ಸಂಘಟನೆಗಳ ಪ್ರತಿನಿಧಿಗಳು. ಯೋಜನಾ ಆಯೋಗದ ಪ್ರತಿನಿಧಿ ಹಾಗೂ ಸಚಿವಾಲಯಗಳ ಪ್ರತಿನಿಧಿಗಳನ್ನು ಒಳಗೊಂಡಿರಬೇಕು.

ಈ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆಯೋಗ ರಚಿಸಬೇಕೆಂಬುದು ನಮ್ಮ ಒತ್ತಾಯ ಈ ಬೇಡಿಕೆ ಇರುವಾಗಲೇ ಸಂಸತ್ತಿನಲ್ಲಿ ಅವಿರೋಧವಾಗಿ ಅಂಗೀಕರಿಸಲ್ಪಟ್ಟು ಗೆಜೆಟ್ ಕೂಡ ಆದ "ರಾಷ್ಟ್ರೀಯ ಮಹಿಳಾ ಆಯೋಗ ಆಗಸ್ಟ್ 1990"ನ್ನು ಅಂದು ಬೆಂಬಲಿಸಿದ ಕಾಂಗ್ರೆಸ್ (ಅಂದು ವಿರೋಧ ಪಕ್ಷವಾಗಿದ್ದ) ಪಕ್ಷ ಇಂದು ಆಯೋಗದ ಬದಲಿಗೆ ಸರ್ಕಾರದ ಅಡಿಯಲ್ಲಿ ಒಬ್ಬ ಆಯುಕ್ತರನ್ನು ನೇಮಿಸಲು ಹೊರಟಿದೆ. ಸಂಸತ್ತಿನಲ್ಲಿ ತಮ್ಮ ಸ್ಥಾನ ಬದಲಾವಣೆಯಾದಂತೆ "ಮಹಿಳಾ ಹಕ್ಕುಗಳ ರಕ್ಷಣೆ" ಯ ಮುಖವಾಡಗಳು ಬದಲಾಗುತ್ತಿವೆ ಎಂದುಕೊಳ್ಳೋಣವೇ ?

— ಜನವಾದಿ ಮಹಿಳಾ ಸಂಘಟನೆ

ಪತ್ರಿಕೆಗಳಲ್ಲಿ ಪ್ರಮುಖವಾಗಿ ಪ್ರಕಟಗೊಂಡವು. ಅಮೆರಿಕ ಸುಪ್ರೀಂ ಕೋರ್ಟಿಗೆ ಥಾಮಸ್ ಅವರನ್ನು ನಾಮಕರಣ ಮಾಡಲಾಗಿತ್ತು. ಅದನ್ನು ಸೆನೆಟ್ ಒಪ್ಪಿಗೆಗಾಗಿ ಕಳುಹಿಸ ಲಾಗಿತ್ತು, ಸೆನೆಟ್ ಒಪ್ಪಿಗೆ ಮತ ಸ್ವೀಕರಿಸುವ ಮುನ್ನ ಅನಿತಾ ಹಿಲ್ ಅವರ ಆರೋಪಗಳು ಬಹಿರಂಗಗೊಂಡವು ಹಿರಿಯ ಹುದ್ದೆಗೆ ಶ್ವೇತ ಭವನ ಮಾಡುವ ನಾಮಕರಣ ವನ್ನು ಸೆನೆಟ್ ಒಪ್ಪಿದರೆ ಮಾತ್ರ ಅದು ಪಕ್ಕಾ ಆಗುತ್ತದೆ ಸೆನೆಟ್‌ನ ಸಮಿತಿಯೊಂದು ದೀರ್ಘ ವಿಚಾರಣೆ ನಡೆಸಿ ನಾಮಕರಣಗೊಂಡಿರುವ ವ್ಯಕ್ತಿ ಆ ಹುದ್ದೆಗೆ ಅರ್ಹನೇ ಎಂಬುದನ್ನು ತನಿಖೆ ಮೂಲಕ ನಿರ್ಧರಿಸಿಕೊಳ್ಳುತ್ತದೆ ಥಾಮಸ್ ಅವರ ನಾಮಕರಣದ ಬಗೆಗೆ ಸೆನೆಟ್ ವಿಚಾರಣೆ ನಡೆಸುತ್ತಿದ್ದಾಗ ಅವರ ವಿರುದ್ಧ ಲೈಂಗಿಕ ಹಿಂಸೆ ಆಪಾದನೆ ಇರುವುದು ವ್ಯಕ್ತವಾಯಿತು,

ಅನಿತಾ ಹಿಲ್ ಅವರ ಹೇಳಿಕೆಗಳಿಂದ ಮಹಿಳಾ ಉದ್ಯೋಗಿಗಳು ತಮ್ಮ ಹಿರಿಯ ಸಹೋದ್ಯೋಗಿಗಳಿಂದ ಅನುಭವಿಸುತ್ತಿದ್ದ ಲೈಂಗಿಕ ವಿಚಾರ ಕುರಿತ ಮುಸುಕನ್ನು ಸರಿಸಿದಂತಾಗಿದೆ. ತಾವು ಅನುಭವಿಸುತ್ತಿದ್ದ ಅಪಮಾನ, ಮಾನಸಿಕ ಹಿಂಸೆಗಳನ್ನು ಹೊರಗೆಡಹುವ ಸಂದರ್ಭ ಒದಗಿ ಬಂದಿತೆಂದು ಅನೇಕ ಮಹಿಳೆಯರು ನಂತರ ಹೇಳಿಕೊಂಡದ್ದು ಇದಕ್ಕೆ ಸೋದಾರಣೆಯಾಗಿದೆ.

ಲೈಂಗಿಕ ಹಿಂಸೆ ಮಹಿಳೆಯರ ಮೇಲೆ ಉಂಟು ಮಾಡುವ ತೀವ್ರ ಪರಿಣಾಮವು ಕೊನೆಗೂ ಜನರಿಗೆ ಅರ್ಥ ವಾಗುವಂತಿದೆ, ಸಾಮಾನ್ಯವಾಗಿ ಲೈಂಗಿಕ ಹಿಂಸೆಯು ಮಾನಸಿಕ- ಮಹಿಳಾ ಉದ್ಯೋಗಿ ಬಗೆಗೆ ಆಕೆಯ "ಬಾಸ್" ಅಥವಾ ಹಿರಿಯ ಅಧಿಕಾರಿ ವಾಕ್ಬಾಣಗಳನ್ನು ಎಸೆದು ಅವಳನ್ನು ಅಪಮಾನಕ್ಕೆ ಗುರಿಪಡಿಸುವುದು ಲೈಂಗಿಕ ಹಿಂಸೆ. ಇದು ಬರೀ ಚುಚ್ಚು ಮಾತಿನ ಪ್ರಹಾರ. ದೈಹಿಕ ವಾಗಿ ಕೂಡ ಹಿಂಸೆ ಮಾಡುವ ಪ್ರವೃತ್ತಿ ಈ ಜನರಲ್ಲಿ ಉಂಟು ಇದರಲ್ಲಿ ದೈಹಿಕ ಸಂಪರ್ಕ ಹಾಗೂ ಸಂಭೋಗ ಕೂಡ ಸೇರಿದೆ. ಹತಾಶ ಸ್ಥಿತಿಯಲ್ಲಿ ಸಂಭೋಗಕ್ಕೆ ಮಹಿಳೆಯರು ಒಪ್ಪಿಕೊಳ್ಳುವುದುಂಟು ಇಲ್ಲಿ ಬಲಾತ್ಕಾರದ ಪ್ರಶ್ನೆ ಇಲ್ಲ,

ತನಗಿಂತ ಕೆಳವಟ್ಟದ ಉದ್ಯೋಗದಲ್ಲಿರುವ ಹೆಣ್ಣಿಗೆ ಆಸೆ ಆಮಿಷ ತೋರಿಸಿ ಲೈಂಗಿಕ ಹಿಂಸಾಚಾರ ನಡೆಸುವ "ಬಾಸ್"ಗಳ ಪ್ರವೃತ್ತಿ ಬಗೆಗೆ ಅಧ್ಯಯನ ಕೂಡ ನಡೆದಿದೆ, ಇಲ್ಲಿ ಲೈಂಗಿಕ ಆಕರ್ಷಣೆಗಿಂತ, ತಾನು ಬಾಸ್ ತನ್ನ ಅಧಿಕಾರ ಎಲ್ಲ ರೀತಿಯಲ್ಲಿಯೂ ಸ್ಥಾಪಿತ ವಾಗಬೇಕು ಎಂಬ ಮನೋ ವೈಕಲ್ಯವೇ ಇದಕ್ಕೆ ಕಾರಣ ಎಂದು ಮನೋವಿಜ್ಞಾನಿಗಳು ಹೇಳುತ್ತಾರೆ.

ಭಾರತದಲ್ಲಿ ಲೈಂಗಿಕ ಹಿಂಸೆ ಅಥವಾ ಕುಚೇಷ್ಟೆ ರೀತಿ ಬೇರೆಯದೇ ಆಗಿರಬಹುದು. ಇಲ್ಲಿ ಬಾಯಿ ಮಾತಿನ ಗತ್ತಿಗೆ ಹೆಚ್ಚು ಅವಕಾಶ. ಅಮೆರಿಕದಲ್ಲಿ ಅದು ಬೇರೆ, ಮಹಿಳಾ ಸಹೋದ್ಯೋಗಿಗಳ ಜತೆ ಮಾತನಾಡುವಾಗ ಪುರುಷರು, ಧಾರಾಳವಾಗಿ ಮೋಲೆ. ಸಂಭೋಗ. ಲೈಂಗಿಕ ಚಿತ್ರ ಮತ್ತು ಪುಸ್ತಕ ಇವೇ ಮುಂತಾದವುಗಳ ಬಗೆಗೆ ಮುಕ್ತವಾಗಿ ಪ್ರಸ್ತಾಪಿಸುತ್ತಾರೆ, ಇಷ್ಟೇ ಅಲ್ಲ, ಸ್ಪರ್ಶ ಹಾಗೂ ಆಕರ್ಷಣೆಯ ಯತ್ನವೂ ಉಂಟು. ಒಬ್ಬ ಮಹಿಳೆಯ ವೃತ್ತಿಪರ ಯಶಸ್ಸು ಕಾಣುವುದು ಆಕೆಯ ಬೌದ್ಧಿಕ ಸಾಮರ್ಥ್ಯದಲ್ಲಿ ಅಲ್ಲ, ಬದಲಾಗಿ ಆಕೆಯ ಲೈಂಗ ಸಾಮರ್ಥ್ಯದಲ್ಲಿ ಎಂದು ಹೇಳುವವರೂ ಇದ್ದಾರೆ.

ಇದೀಗ ಉದ್ಯೋಗಸ್ಥರ ಸಂಖ್ಯೆ ಹೆಚ್ಚುತ್ತಿದೆ, ಅವರು ಅನುಭವಿಸುವ ಹಿಂಸೆ ಕೂಡ ಅಧಿಕಗೊಳ್ಳುತ್ತಿದೆ, ಇದನ್ನು ಪರಿಗಣಿಸುವ ವ್ಯವಸ್ಥೆಯೊಂದು ರೂಪುಗೊಳ್ಳ ಬೇಕಾದುದು ತೀರಾ ಅಗತ್ಯ. ಲೈಂಗಿಕ ಹಿಂಸೆ ಕುರಿತ ದೂರುಗಳನ್ನು ಪರಿಶೀಲಿಸಲು ಮಂಡಳಿ ಮತ್ತು ಸಂಸ್ಥೆಗಳನ್ನು ಸ್ಥಾಪಿಸುವತ್ತ ಸರ್ಕಾರ ಯೋಚಿಸುವುದು ಈಗಂತೂ ತುಂಬಾ ಮುಖ್ಯವಾಗಿದೆ,

(ವಿವಿಧ ಮೂಲಗಳಿಂದ)

